


# ಅಚಲ

ಸಂಪುಟ ೧೧
ಸಂಚಿಕೆ ೨

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ
ದ್ವೈಮಾಸಿಕ

ಮೇ ೧೯೯೬






ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು

ಬೆಲೆ
ಬಿಡಿ ಪ್ರತಿ - 4 ರೂ
ವಾರ್ಷಿಕ ಚಂದಾ - 25 ರೂ
ಆಜೀವ ಚಂದಾ - 200 ರೂ
(ಸಂಸ್ಥೆಗಳಿಗೆ) - 250 ರೂ

ಚಂದಾ ಮತ್ತು ಲೇಖನಗಳನ್ನು
ಕಳುಹಿಸುವ ವಿಳಾಸ
ಸಂಪಾದಕರು
ಅಚಲ
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
I ಮೇನ್, 9ನೇ ಕ್ರಾಸ್
ವಿಜಯನಗರ II ಹಂತ,
ಬೆಂಗಳೂರು - 40

## ಅಂತರಂಗ

## ನೂರೇನ್‌ಳ ಅಂತರಂಗ

ಕಣ್ಣುಮುಚ್ಚಿ ದೀರ್ಘ
ಪ್ರಾರ್ಥನೆ ಸಲ್ಲಿಸಿ,
ತಲೆ ತುಂಬ ಎಳೆದ
ಮುಸುಕಿನಡಿಯಲ್ಲಿ
ಕಣ್ಣ ಮುತ್ತುಗಳ
ಬಳಬಳನೇ ಉದುರಿಸಿ
ಕರುಳಿಗೆ ಹೊತ್ತಿಕೊಂಡ
ಬೆಂಕಿಯ ಜ್ವಾಲೆ
ಹೊರ ಚಾಚದಂತೆ
ನಂದಿಸಿ ಮೇಲೇಳುವ
ಹೊಗೆಯನ್ನು ನೋಡುತ್ತ
ನಿಟ್ಟುಸಿರು ಬಿಡುತ್ತ
ತನ್ನವನು ವಿಶ್ವಕಪ್
ಗೆದ್ದು ಬರುವನೆಂದು
ವಿಜೃಂಭಣೆಯಿಂದ
ಬರಮಾಡಿಕೊಳ್ಳಬೇಕೆನ್ನುವ
ಆಸೆಯ ಕೆಂಪು ಬಣ್ಣ
ಪತ್ರಿಕೆಯ "ತಲ್ಲಾಕ್"
ಶಬ್ದ ಕೇಳಿ ಬಿಳುಪಾಗಿ
ಬದುಕೆಳೆದ ಬರೆಗಳು
ಚಾವಟಿಯ ಏಟುಗಳು
ಅಲ್ಲಾಹ್‌ನಿಗೆ ಸಲ್ಲಿಸಿದ
ವ್ಯರ್ಥ ಪ್ರಾರ್ಥನೆಗಳು
ಮನದ ಬಣ್ಣದ ಕನಸುಗಳು
ಒಡೆದು ಚೂರಾದ ಆಸೆಗಳು
ರೆಕ್ಕೆ ಮುರಿದ ಹಕ್ಕಿಯಂತೆ
ಒಂಟಿಯಾಗಿ ಬಿಕ್ಕಿದ ಬಿಕ್ಕುಗಳು
ಚಾರಮಿನಾರದ ಚೌಕದಲ್ಲಿ
ಮೀನಾರುಗಳ ದಿಟ್ಟಿಸುತ್ತ
ಗೋಳಿಟ್ಟ ನೂರೇನ್ನಳ
ಶಾಪ ಆಕಾಶದಲ್ಲಡಗಿರುವ
ಮಿಂಚು ಸೆಳಕು ಬಿಜಲಿಗಳಿಗೆ
ತಟ್ಟದಿರುವದೆಂತು?

• ಕೆ. ಶರೀಫಾ

(ನೂರೆನ್:- ಕ್ರಿಕೆಟ್ ಕ್ಯಾಪ್ಟನ್ ಅಜರುದ್ದೀನನ ಪತ್ನಿ)

## ಕೊನೆಯ ವಿದಾಯ

ತುಸುತುಸುವೆ ಹತ್ತಿರವಾಗುವ
ಕ್ರೂರ ಸಾವಿನ ಸಂಬಂಧ
ವಿರಹದ ಬಿಸಿ ಮೀರಿ
ಹೊರ ಬರುವ ಕರುಳಸಂಬಂಧ
ಬದುಕು ಮುದುಡುವಂತೆ
ಬೀರುವ ಸುಡು ನೋಟ
ಬದುಕಿನ ಆಳ ಅಗಲ
ಏರು ಪೇರಿನಲ್ಲಿ ಏಕುತ್ತ
ಎಳೆದು ತಂದ ಬಾಳಬಂಡಿ
ಮನೆ ಮಂದಿಗೆಲ್ಲ ಬಡಿಸಿ
ಬರಿ ಹೊಟ್ಟೆ, ಖಾಲಿ ತಟ್ಟೆ
ಬರೀ ನೀರು ಗತಿಯಾಗಿ
ತೃಪ್ತಿ ಮರೀಚಿಕೆ
ಕ್ರೌರ್ಯ ಪುನರಾವರ್ತನೆ
ತಾಳದೇ ತತ್ತರಿಸಿ
ಕುಸಿದಾಗ ಭೂಮಿಗೆ
ಸಾವು ನೋವಿನ ಸೆಣಸಾಟ
ನಾಯಕಿಗೆ ದುರಂತದ
ಬಾಯ್ತೆರೆದ ಭೂಮಿಯಲಿ
ಹುಡಿಯಾಗಿ ಒಡಲು ಸೇರಿ
ಮೊರೆಹೋಗಿ ಚಿರನಿದ್ರೆ
ಹೇಳಿದಳು ಕೊನೆ ವಿದಾಯ
ನೋವು ಕ್ರೌರ್ಯಗಳಿಗೆ.

• ಕೆ. ಶರೀಫಾ

# ನ್ಯಾಯಾಂಗದ ಲಿಂಗಬೇಧ ನೀತಿಗೆಲ್ಲಿ ಕೊನೆ?

ಭಾರತದ ಸಂವಿಧಾನದಲ್ಲಿ ಹೆಣ್ಣು ಗಂಡುಗಳಿಬ್ಬರಿಗೂ ಸಮಾನತೆಯಿದೆಯೆನ್ನುವುದು ಕಾಗದದ ಮೇಲಿನ ಸತ್ಯ. ಸಂಪತ್ತು, ವಿದ್ಯೆಗಳಿಗೆ ಅಧಿದೇವತೆ ಹೆಣ್ಣಾಗಿರುವಂತೆ ನ್ಯಾಯಕ್ಕೂ ಅವಳೇ ದೇವತೆ. ಹೆಣ್ಣಿಗೆ ನೀಡಿರುವ ಈ ದೇವತೆಯ ಪಟ್ಟ ಅವಳನ್ನು ಎಲ್ಲ ಸೌಭಾಗ್ಯಗಳಿಂದಲೂ ವಂಚಿಸಿದ್ದನ್ನು ಮರೆ ಮಾಡುವ ಕೃತ್ಯವೇ ಆಗಿದೆ. ಸಮಾಜದಲ್ಲಿ ಹೆಣ್ಣಿಗಿರುವ ದುರವಸ್ಥೆ, ಎರಡನೆಯ ದರ್ಜೆಯ ಸ್ಥಾನಮಾನವೆಲ್ಲವೂ ನ್ಯಾಯಾಲಯದ ತೀರ್ಪುಗಳಲ್ಲೂ ವ್ಯಕ್ತವಾಗುತ್ತಾ ಬರುತ್ತಿದ್ದು ಮಹಿಳೆಯರ ಮೇಲೆ ಎಸಗಿದ ಅಪರಾಧಗಳು ಸರಳವಾಗಿ, ಸಲೀಸಾಗಿ ನಿರ್ಲಕ್ಷ್ಯಕ್ಕೆ ಒಳಗಾಗುತ್ತಿವೆ; ಹಾಗೆಯೇ ನ್ಯಾಯಾಲಯದ ಜರಡಿಯಲ್ಲಿ ಕೇಡಿಗಳೆಲ್ಲ ಪಾರಾಗುತ್ತಾ ಹೊರಟಿರುವುದು ಸಾಮಾಜಿಕ ನ್ಯಾಯವೆನ್ನುವುದರ ಅಣಕದಂತಿದೆ.

ಇತ್ತೀಚೆಗೆ ನಡೆದಿರುವ ಭಾಂವ್ರಿದೇವಿ ಪ್ರಕರಣ ನಮ್ಮ ನ್ಯಾಯಾಂಗದ ಸೆಕ್ಯುಲರ್ ಸ್ವರೂಪದ ಬಗೆಗೆ ಅನುಮಾನಪಡುವಂತೆ ಮಾಡಿದೆ. ರಾಜಾಸ್ಥಾನದ ಹಳ್ಳಿಗಾಡಿನ ಬಡ ಕುಂಬಾರ ಹೆಣ್ಣು ಸಾಮಾಜಿಕ ಅನಿಷ್ಟದೆದುರು ದಿಟ್ಟಳಾಗಿ ನಿಂತವಳು. ಬಾಲ್ಯ ವಿವಾಹ ವಿರೋಧಿಸಿ ಸಾಮಾಜಿಕ ಬದಲಾವಣೆಯ ಹೋರಾಟಕ್ಕಾಗಿ ನಿಂತ ಭಾಂವ್ರಿಗೆ ಸಿಕ್ಕ ಪ್ರತಿಫಲ ಗಂಡನೆದುರೇ ಸಾಮೂಹಿಕ ಅತ್ಯಾಚಾರ. ಹೆಣ್ಣನ್ನು ಅಧೀನವಾಗಿಸಲು, ಅಧೀರಳಾಗಿಸಲು ಲೈಂಗಿಕ ಕ್ರೌರ್ಯವನ್ನು ಬಳಸುತ್ತಾ ಬಂದಿರುವ ನಮ್ಮ ಸಮಾಜದಲ್ಲಿ, ಭಾಂವ್ರಿ ತನ್ನ ಮೇಲಿನ ಹೇಸಿಗೆಯ ಅತ್ಯಾಚಾರದ ಅಪಮಾನವನ್ನು ಮುಚ್ಚಿಟ್ಟು ಸುಮ್ಮನಿರದೆ, ನ್ಯಾಯಾಲಯದ ಕಟ್ಟೆ ಹತ್ತಿದಳು. ಆದರೆ ನವೆಂಬರ್ 1995, ಜಯಪುರ ಡಿಸ್ಟ್ರಿಕ್ಟ್ ಮತ್ತು ಸೆಷನ್ಸಿ ನ ನ್ಯಾಯಾಧೀಶರು ಭಾಂವ್ರಿಯ ಮೇಲೆ ಅತ್ಯಾಚಾರ ಎಸಗಿದ ಆರೋಪದ ಮೇಲೆ ಬಂಧಿಸಿದ್ದ ಐದು ಮಂದಿ ಆರೋಪಿಗಳನ್ನು ಬಿಡುಗಡೆ ಮಾಡಿದ್ದು, ಆಗ ನ್ಯಾಯಾಲಯ ನೀಡಿದ ತೀರ್ಪು ಆಘಾತಕಾರಿಯ್ಯಾಗಿದೆ.

"ಈ ಆರೋಪಿತರು 50 ರಿಂದ 60ರ ವಯಸ್ಸಿನವಲ್ಲಿದ್ದು, ಗೌರವಾನ್ವಿತ ಕುಟುಂಬದಿಂದ ಬಂದವರು, ಅವರು ಮಾನಭಂಗ ಮಾಡಲು ಸಾಧ್ಯವೇ ಇಲ್ಲ. ತಮ್ಮ ವಯಸ್ಸು, ಜಾತಿ ಮರೆತು ಇಂಥ ಕೆಲಸ ಮಾಡುವಷ್ಟು ನಮ್ಮ ಭಾರತೀಯ ಸಂಸ್ಕೃತಿ ಅಧೋಗತಿಗಿಳಿದಿಲ್ಲ' ಎಂದು ಹೇಳಿ ಬಿಡುಗಡೆ ಮಾಡಿದ್ದು, ಮಹಿಳಾ ಜಾಗೃತಿಯ ಹೋರಾಟಕ್ಕೆ ದೊಡ್ಡ ಪೆಟ್ಟಾಗಿದೆ. 1979ರ ಮಥುರಾ ಪ್ರಕರಣದಿಂದ ಇತ್ತೀಚೆಗೆ ಹಲವಾರು ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯವು ಬಹಳಷ್ಟು ಪ್ರಗತಿಪರ ಹೆಜ್ಜೆಗಳನ್ನಿಡುತ್ತಿರುವಾಗ ಇತ್ತೀಚಿನ ಭಾನ್ವರಿ ಮೊಕದ್ದಮೆಯಲ್ಲಿ ಜಯಪುರದ ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ನ್ಯಾಯಾಧೀಶರು ಆರೋಪಿಗಳನ್ನು ಬಿಡುಗಡೆ ಮಾಡಲು ಕೊಟ್ಟಿರುವ ಕಾರಣಗಳು ಈವರೆಗೂ ಕಷ್ಟಪಟ್ಟು ಗಳಿಸಿದ ವಿಜಯವು ಅರ್ಥಹೀನವೆಂಬಂತೆ ಮಾಡಿದೆ. ಮಹಿಳಾ ಚಳುವಳಿಗೇ ಸವಾಲೊಡ್ಡಿದ ಭಾಂವ್ರಿದೇವಿಯ ಪರವಾಗಿರುವ ಸಾಕ್ಷ್ಯಗಳನ್ನು ನಿರ್ಲಕ್ಷಿಸಿ ಅವಳ ಚಾರಿತ್ರ್ಯವನ್ನು ಶಂಕಿಸಿದ, ಅವಳ ಗಂಡನ ಅಸಹಾಯಕತೆಯನ್ನು ಅನುಮಾನಿಸಿದ, ಮೇಲ್ಜಾತಿ, ಮೇಲು ವರ್ಗದ ವ್ಯಕ್ತಿಗಳನ್ನು 'ಗೌರವಾನ್ವಿತ' ರೆಂದು ಕರೆದು ಅಪರಾಧದಿಂದ ಮುಕ್ತಗೊಳಿಸಿದ ನಮ್ಮ ನ್ಯಾಯಾಲಯಗಳ ಲಿಂಗಭೇದ ನೀತಿ ಕಣ್ಣಿಗೆ ರಾಚುವಂತೆ ಕಾಣುತ್ತಿದೆ. ಇಂತಹ ಲೈಂಗಿಕ ಕ್ರೌರ್ಯ ಹಳ್ಳಿಯ ಅನಕ್ಷರಸ್ಥ ಬಡ ಹೆಂಗಸನ್ನು ಕಾಡುತ್ತಿರುವಂತೆ, ಅತ್ಯಂತ ವಿದ್ಯಾವಂತ, ಉನ್ನತ ಹುದ್ದೆಯಲ್ಲಿರುವ ರೂಪನ್ ಬಜಾಜ್‌ರಂತಹವರನ್ನು ಕಾಡುತ್ತಿದೆ. ಇಂತಹ ಸಂದರ್ಭದಲ್ಲಿ ಪುರುಷ ಪ್ರಧಾನ ಸಮಾಜದ ಸ್ತ್ರೀ ಶೋಷಣೆಯ ಬಲಿ ಪಶುವಾದ ಭಾಂವ್ರಿ, ಅದೇ ಶೋಷಕ ವ್ಯವಸ್ಥೆಯ ವಿರುದ್ಧ ಸಿಡಿದೆದ್ದ ಸಾಹಸದ ಪ್ರತಿಮೆಯಾಗಿಯೂ ಕಂಗೊಳಿಸುತ್ತಾಳೆ.

ಹೆಣ್ಣನ್ನು ಕುರಿತ ಕೇಸುಗಳಲ್ಲಿ ಕಂಡು ಬರುವ ಇಂಥ ಲಿಂಗ ತಾರತಮ್ಯಕ್ಕೆ ಕೇವಲ ಭಾಂವ್ರಿಯ ಪ್ರಕರಣ ಮಾತ್ರ ಉದಾಹರಣೆಯಾಗಿಲ್ಲ. ಈ ಕೇಸಿನ ಬಿಸಿ ಆರುವ ಮೊದಲೇ ಇತ್ತೀಚೆಗೆ ಹೊರಬಿದ್ದ ಸುಪ್ರೀಂ ಕೋರ್ಟಿನ ತೀರ್ಪು, ಮಹಾರಾಷ್ಟ್ರದ ವಿಜಯ ಪ್ರಕರಣದಲ್ಲೂ ಅಪರಾಧಿಗಳು ತಮ್ಮ ಕ್ರೌರ್ಯದ ಪರಮಾವಧಿಗೆ ತಕ್ಕ ಶಿಕ್ಷೆ ಪಡೆಯದೆ ನುಣುಚಿಕೊಂಡರೆಂಬ ಭಾವನೆ ನೀಡಿದೆ. ಎಂಟು ತಿಂಗಳ ತುಂಬು ಗರ್ಭಿಣಿ ವಿಜಯ 25,000 ರೂಪಾಯಿ ವರದಕ್ಷಿಣೆ ತರಲಿಲ್ಲವೆಂಬ ಕಾರಣಕ್ಕೆ ತನ್ನ ಗಂಡ ರವೀಂದ್ರ ಚೌತ್ಮಲ್‌ನಿಂದ ತುಂಡು ತುಂಡಾಗಿ ಕತ್ತರಿಸಲ್ಪಟ್ಟಳು. ಅತ್ಯಂತ ಭೀಭತ್ಸ ಕೊಲೆ ಇದಾಗಿತ್ತು. ಹೊಟ್ಟೆಯಲ್ಲಿನ ಮಗು

ಹುಟ್ಟಿ ಬಿಟ್ಟರೆ ಮದುವೆಯ ಮಾರುಕಟ್ಟೆಯಲ್ಲಿ ತನ್ನ ಬೆಲೆ ಇಳಿದು ಹೋಗುತ್ತದೆಂಬ ಲೆಕ್ಕಾಚಾರದಲ್ಲಿ ಹೆಂಡತಿಯನ್ನು ತನ್ನ ಹಾದಿಯಿಂದ ದೂರ ಸರಿಸಲು ಗಂಡ, ತನ್ನ ತಂದೆಯೊಂದಿಗೆ ಕೂಡಿಕೊಂಡು ಗರ್ಭಿಣಿ ವಿಜಯಳ ಕೈಕಾಲು ಕುತ್ತಿಗೆ, ರುಂಡ ಮುಂಡ ಎಲ್ಲವನ್ನೂ ತುಂಡು ತುಂಡಾಗಿ ಕತ್ತರಿಸಿ ಪ್ಲಾಸ್ಟಿಕ್‌ನಲ್ಲಿ ಸುತ್ತಿ ಗೋರೈ ನದಿಯ ಕೊರಕಲಿನಲ್ಲಿ ಎಸೆದು ಬಂದರು. ಈ ಅಪರಾಧದ ಅಗಾಧತೆಯನ್ನು ನೋಡಿ ಹೈಕೋರ್ಟು ರವೀಂದ್ರ ಚೌತ್ಮಲ್‌ನಿಗೆ ಮರಣದಂಡನೆ ವಿಧಿಸಿದಾಗ ಹಣದ ಆಸೆಗೆ ಏನಕ್ಕೂ ಹೇಸದ ಮನುಷ್ಯನಿಗೆ ತಕ್ಕ ಶಿಕ್ಷೆಯಾಗಿ, ನ್ಯಾಯ ದೊರೆತ ಸಮಾಧಾನವಿತ್ತು. ಆದರೆ ಇದೀಗ ಹೊರ ಬಿದ್ದ ಸುಪ್ರೀಂ ಕೋರ್ಟಿನ ತೀರ್ಪು ಈ ಮರಣದಂಡನೆಯನ್ನು ಬೆಂಬಲಿಸಲಿಲ್ಲ. ಅದಕ್ಕೆ ಗೌರವಾನ್ವಿತ ನ್ಯಾಯಾಧೀಶರು ಕೊಟ್ಟ ಕಾರಣ ಹೀಗಿದೆ - 'ಈ ಕೊಲೆಯ ಹಿಂದಿನ ಉದ್ದೇಶ ವರದಕ್ಷಿಣೆ ತರುವ ಮತ್ತೊಂದು ಹೆಣ್ಣನ್ನು ತರುವುದಾಗಿದೆ. ವರದಕ್ಷಿಣೆ ಸಾವುಗಳು ನಮ್ಮ ರಕ್ತ ಕುದಿಸುವಂತಿದ್ದರೂ, ಈ ಕೇಸು ಅತ್ಯುಗ್ರ ಶಿಕ್ಷೆಗೆ ಅರ್ಹವಾದುದೇ ಎಂಬ ಪ್ರಶ್ನೆ ನಮ್ಮೆದುರು ನಿಂತಿದೆ. ಬಹಳಷ್ಟು ಚಿಂತಿಸಿದ ಮೇಲೆ ಈ ಕೇಸನ್ನು 'ಅತ್ಯಂತ ಅಪರೂಪದ' ಅಪರಾಧವಾಗಿ ಪರಿಗಣಿಸಲು ಸಾಧ್ಯವಾಗಲಿಲ್ಲ. ಕಾರಣ ವರದಕ್ಷಿಣೆ ಸಾವುಗಳು ಅಪರೂಪದ ಅಪರಾಧಗಳಾಗಿ ಉಳಿದಿಲ್ಲ. ಹೆಚ್ಚುತ್ತಿರುವ ಸಾವುಗಳು ಇದಕ್ಕೆ ಪುರಾವೆಯಾಗಿವೆ. ಇಂಥಾ ಸಾವುಗಳನ್ನು ತಡೆಗಟ್ಟಲು ಒಂದು ಹಂತದಲ್ಲಿ ಮರಣದಂಡನೆ ವಿಧಿಸುವ ಬಗ್ಗೆ ಯೋಚಿಸಿದರೂ, ಮರಣ ದಂಡನೆ ಇಂಥಾ ಸಾವುಗಳನ್ನು ತಡೆಗಟ್ಟಬಲ್ಲದು, ಎಂಬ ಬಗ್ಗೆ ಅನುಮಾನಗಳಿವೆ. ಹಾಗಾಗಿ ರವೀಂದ್ರ ಚೌತ್ಮಲ್‌ನಿಗೆ ಮರಣದಂಡನೆಯ ಬದಲು ಜೀವಾವಧಿ ಶಿಕ್ಷೆಯನ್ನು ವಿಧಿಸಲಾಗಿದೆ. ಇವು ಸುಪ್ರೀಂ ಕೋರ್ಟಿನ ನ್ಯಾಯಾಧೀಶರಾದ ಹನ್ಸಾರಿಯಾ ಮತ್ತು ಜಿ.ಎನ್.ರೇ ಅವರ ತೀರ್ಪಿನ ಕೆಲವು ಸಾಲುಗಳು ವರದಕ್ಷಿಣೆ ಸಾವು ಅಪರೂಪದ್ದೇನೂ ಅಲ್ಲ. ಹಾಗಾಗಿ ವರದಕ್ಷಿಣೆ ತರುವ ಮತ್ತೊಂದು ಹೆಣ್ಣಿನ ಆಸೆಯಲ್ಲಿ ರವೀಂದ್ರ ಚೌತ್ಮಲ್ ತನ್ನ ಎಂಟು ತಿಂಗಳ ಬಸುರಿ ಹೆಂಡತಿಯನ್ನು ಕೊಚ್ಚಿ ಹಾಕಿದ್ದು ಮರಣದಂಡನೆ ವಿಧಿಸುವಷ್ಟು ದೊಡ್ಡ ಅಪರಾಧವಲ್ಲ, ಎಂದು ಸುಪ್ರೀಂ ಕೋರ್ಟು ಭಾವಿಸಿರುವುದು ನಿಜಕ್ಕೂ ಮಹಿಳಾ ಜಾಗೃತಿಯ ಬಗ್ಗೆ ಕಾಳಜಿಯಿರುವವರಿಗೆ, ಮಾನವೀಯತೆಯಲ್ಲಿ ನಂಬಿಕೆಯಿರುವವರಿಗೆ ಆಘಾತಕಾರಿ ಹಾಗೂ ದಿಗ್ಭ್ರಮೆಗೊಳಿಸುವ ಸಂಗತಿಯಾಗಿದೆ.

ಹಾಗಿದ್ದರೆ 'ದಿನವೂ ಸಾಯುವವರಿಗೆ ಅಳುವವರು ಯಾರು? ಎಂಬ ಮಾತನ್ನು ಅಧಿಕೃತವಾಗಿ ದೇಶದ ಸಮಗ್ರ ವ್ಯವಸ್ಥೆಯೇ ಒಪ್ಪಿಕೊಂಡಾಯಿತಲ್ಲವೇ? ಇದು ಹೆಣ್ಣಿನ ಮೇಲೆ ನಡೆಯುತ್ತಿರುವ ಎಲ್ಲಾ ದೌರ್ಜನ್ಯಗಳನ್ನು ಕುರಿತಂತೆಯೂ ಹೇಳಿದ ಮಾತಾಗುತ್ತದೆ. ಹೆಣ್ಣಿನ ಜೀವಕ್ಕೆ ಬೆಲೆಯೇ ಇಲ್ಲ ಎಂಬುದನ್ನು ಈ ತೀರ್ಪುಗಳು ಮತ್ತೆ ಮತ್ತೆ ಸಾರುತ್ತಿವೆ. ದೆಹಲಿಯ ಮಧುಬಾಲ ಮಿಟ್ಟಲ್ ರಸ್ತೆ ಅಪಘಾತದಲ್ಲಿ ತೀರಿಕೊಂಡಾಗಲೂ "ಹೆಣ್ಣುಮಕ್ಕಳು ತಂದೆ ತಾಯಿಗೆ ಹೊರೆಯಾದ್ದರಿಂದ ಅವಳ ಸಾವು ಒಂದು ಬಗೆಯಲ್ಲಿ ತಂದೆ ತಾಯಿಯರನ್ನು ಕಷ್ಟದಿಂದ ಬಿಡುಗಡೆ ಮಾಡಿತು. ಅವರಿಗೆ ಯಾವ ಪರಿಹಾರವೂ ಬೇಡ" ಎಂಬಂತೆ (ಟ್ರಿಬ್ಯೂನಲ್) ತೀರ್ಪಿತ್ತದ್ದು ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಅತ್ಯಂತ ಕ್ರೂರವಾದ ಚಿಂತನೆಯೆನಿಸುತ್ತದೆ.

ಈ ಎಲ್ಲ ದಮನಕಾರಿ ಶಕ್ತಿಗಳ ವಿರುದ್ಧ ಇಂದು ಹೋರಾಟ ನಡೆಯಬೇಕಿದೆ. ಮಹಿಳಾ ಹೋರಾಟದ ಸಂಕೇತವಾಗಿ ನಿಂತಿರುವ ಭಾಂವ್ರಿ ಮತ್ತು ಅವಳನ್ನು ಬೆಂಬಲಿಸಬೇಕಾದ್ದು ಪ್ರಾಥಮಿಕ ಕರ್ತವ್ಯವೆಂದು ಇಡೀ ಮಹಿಳಾ ಚಳುವಳಿ ತಿಳಿಯಬೇಕಾಗಿದೆ. ಇಂದು ಮಹಿಳೆಯ ಮೇಲೆ ನಡೆಯುತ್ತಿರುವ ಈ ಎಲ್ಲಾ ದೌರ್ಜನ್ಯಗಳ ಹಿಂದೆ ಅಧಿಕಾರದ ಬಲ ಪಡೆದವರ, ಜಾತಿ, ವರ್ಗಗಳಿಂದ ಉನ್ನತ ಸ್ಥಾನದಲ್ಲಿರುವ ಪ್ರತಿಷ್ಠಿತರ ಶಕ್ತಿ ಸಮೂಹವೇ ಒಂಟಾಗಿ ನಿಂತಿದೆ. ಇಂತಹ ಪ್ರಬಲ ಶಕ್ತಿಯ ವಿರುದ್ಧದ ಹೋರಾಟಕ್ಕೆ ಮಹಿಳೆಯರು ಅಣಿಯಾಗುವುದಕ್ಕೆ ಬೃಹತ್ ಸಿದ್ಧತೆ ಬೇಕು. ಅಂತಹ ಸಿದ್ಧ, ಸಂಘಟಿತ ಹೋರಾಟ ಮಾತ್ರ ನ್ಯಾಯಾಂಗ ವ್ಯವಸ್ಥೆಗೆ ಕಾಯಕಲ್ಪವನ್ನು ಒದಗಿಸಬಲ್ಲುದು.

• ಎನ್. ಗಾಯತ್ರಿ

# ಲೋಕಸಭಾ : ಕುಸಿದ ಮಹಿಳಾ ಬಲ

ಸಂಸತ್ತಿನಲ್ಲಿ ಮಹಿಳಾ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸುವ ಬಗೆಗೆ ಎಲ್ಲ ರಾಜಕೀಯ ಪಕ್ಷಗಳೂ ಬಾಯಿ ತುಂಬಾ ಮಾತಾಡಿದ್ದರೂ 11ನೇ ಲೋಕಸಭೆಯಲ್ಲಿ ಕೇವಲ 36 ಮಹಿಳೆಯರು ಇರುತ್ತಾರೆ. ಸದನದ ಒಟ್ಟು ಸದಸ್ಯ ಬಲ 544.

ಈಗಷ್ಟೇ ಮುಗಿದ ಲೋಕಸಭೆ ಚುನಾವಣೆಗಳಲ್ಲಿ 491 ಮಹಿಳೆಯರು ಸ್ಪರ್ಧಿಸಿದ್ದರು. ಗೆದ್ದ 36 ಸದಸ್ಯರಲ್ಲಿ 16 ಮಂದಿ ಕಾಂಗ್ರೆಸ್ ಪಕ್ಷಕ್ಕೆ ಸೇರಿದವರು. 13 ಜನ ಭಾರತೀಯ ಜನತಾ ಪಕ್ಷದ ಟಿಕೇಟಿನಲ್ಲಿ ಜಯಗಳಿಸಿದವರು. ಜನತಾ ದಳದ ಪ್ರತಿನಿಧಿಯಾಗಿ ಮೂವರು, ಸಮಾಜವಾದಿ ಪಕ್ಷದ ಇಬ್ಬರು ಹಾಗೂ ಸಿಪಿಐ ಮತ್ತು ಎಡರಂಗದ ತಲಾ ಒಬ್ಬರು ಲೋಕಸಭೆ ಪ್ರವೇಶಿಸಿದ್ದಾರೆ. ರಾಜಕೀಯ ರಂಗದಲ್ಲಿ ಚಟುವಟಿಕೆಗಳಿಂದ ಜನಮನ್ನಣೆಗಳಿಸಿರುವ ಗೀತಾ ಮುಖರ್ಜಿ (ಸಿಪಿಐ), ಮನೇಕಾ ಗಾಂಧಿ (ದಳ), ಮಮತಾ ಬ್ಯಾನರ್ಜಿ ಮತ್ತು ಗಿರಿಜಾ ವ್ಯಾಸ್(ಕಾಂಗ್ರೆಸ್), ವಿಜಯರಾಜೇ ಸಿಂಧಿಯಾ, ಉಮಾ ಭಾರತಿ ಮತ್ತು ಸುಷ್ಮಾ ಸ್ವರಾಜ್ (ಬಿಜೆಪಿ) ಗೆದ್ದು ಸದನದಲ್ಲಿ ಇನ್ನೂ 'ಧ್ವನಿ' ಇದೆ ಎಂಬುದನ್ನು ಸಾಬೀತು ಪಡಿಸಲಿದ್ದಾರೆ. ಸೋತವರಲ್ಲಿ ಕಾಂಗ್ರೆಸ್‌ನ ಕೃಷ್ಣಾಸಾಹಿ ಮತ್ತು ವಿಮಲಾ ವರ್ಮಾ, ದಳದ ಸರೋಜ್ ದುಬೆ, ಸಿಪಿಎಂ.ನ ಸುಭಾಷಿಣಿ ಅಲಿ ಮತ್ತು ಮಾಲಿನಿ ಭಟ್ಟಾಚಾರ್ಯ ಪ್ರಮುಖರು.

ಹವಾಲಾ ಪ್ರಕರಣದಿಂದಾಗಿ ಕಾಂಗ್ರೆಸ್‌ನ ಟಿಕೆಟ್‌ನಿಂದ ವಂಚಿತರಾಗಿದ್ದ ಕಮಲ್‌ನಾಥ್ ಮತ್ತು ಆರವಿಂದ ನೇತಂ ಅವರ ಪತ್ನಿಯರಿಗೆ ಟಿಕೆಟ್ ನೀಡಲಾಗಿತ್ತು. ಅಲ್ಕಾನಾಥ್ ಮತ್ತು ಚಬ್ಬಿಲ್ ನೇತಂ ಕಾಂಗ್ರೆ ಪಕ್ಷದ ಪ್ರತಿನಿಧಿಗಳಾಗಿ ಗೆದ್ದಿದ್ದಾರೆ.

ಲೋಕಸಭೆಯಲ್ಲಿ ಮಹಿಳಾ ಹಕ್ಕುಗಳ ಪ್ರತಿಪಾದಕರಾಗಿ ಧ್ವನಿ ಏರಿಸುತ್ತಿದ್ದ ಸಿಪಿಎಂನ ಮಾಲಿನ ಭಟ್ಟಾಚಾರ್ಯ ಸೋತದ್ದು ಅನಿರೀಕ್ಷಿತ ಹಾಗೂ ಅಪಾರ ನಷ್ಟದ್ದಾಗಿದೆ. ಸಿಪಿಐನ ಗೀತಾ ಮುಖರ್ಜಿ ನಾಲ್ಕನೇ ಬಾರಿಗೆ ಲೋಕಸಭೆ ಪ್ರವೇಶಿಸಿದ್ದು, 'ಧ್ವನಿ ಅಡಗಿಲ್ಲ' ಎಂದು ಹೇಳಿಕೊಳ್ಳುವಂತೆ ಮಾಡಿದ್ದಾರೆ. ಅವರ ಜತೆಗೆ ಸಿಪಿಎಂನ ಸಂಧ್ಯಾಗೌರಿ ಇದ್ದಾರೆ. ಸಂಧ್ಯಾ ಅವರು ಇದೇ ಮೊದಲ ಬಾರಿಗೆ ಸಂಸತ್ ಭವನ ಪ್ರವೇಶಿಸುತ್ತಿದ್ದರೂ ಸಂಘಟನೆ ಮೂಲಕ ಅವರು ತೀವ್ರ 'ಚಟುವಟಿಕಾ ಕೇಂದ್ರ' ಎಂದೆನಿಸಿಕೊಂಡಿದ್ದಾರೆ. ಕಾಂಗ್ರೆಸ್, ದಳ ಮತ್ತು ಬಿಜೆಪಿಯ 'ಫೈರ್ ಬ್ರಾಂಡ್' ಎಂದೆನಿಸಿಕೊಂಡಿರುವ ಅನುಕ್ರಮವಾಗಿ ಮಮತಾ ಬ್ಯಾನರ್ಜಿ, ಭಗವತಿ ದೇವಿ ಹಾಗೂ ಸುಷ್ಮಾ ಸ್ವರಾಜ್ ಮತ್ತು ಉಮಾ ಭಾರತಿ ಮತ್ತೆ ಸಂಸತ್ ಪ್ರವೇಶಿಸಿದ್ದು ತಮ್ಮ ತಮ್ಮ ಪರಿಶ್ರಮ ಹಾಗೂ ಸಂಘಟನೆಯ ಕಾರ್ಯಗಳ ಮೂಲಕವೇ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಅಲ್ಲದೇ ಪಕ್ಷದ ಪ್ರಮುಖ ಕಾರ್ಯಕರ್ತರಾಗಿ ಇವರು ಜನಮನ್ನಣೆ ಪಡೆದಿದ್ದಾರೆ. ಮನೇಕಾ ಗಾಂಧಿ ತಮ್ಮದೇ ಕ್ಷೇತ್ರದಲ್ಲಿ (ಪರಿಸರ, ಪ್ರಾಣಿ ರಕ್ಷಣೆ) ಜನಪ್ರಿಯತೆ ಗಳಿಸಿದ್ದಾರೆ.

ಮಾಜಿ ಡಕಾಯಿತರಿಗೆ ಟಿಕೆಟ್ ನೀಡುವ ವಿಚಾರ ಚರ್ಚೆಯಲ್ಲಿ ಇರುವಾಗಲೇ ಫೂಲನ್‌ದೇವಿ ಭಾರೀ ಜಯಗಳಿಸಿ ಪ್ರಜಾಸತ್ತೆಯ ಪುಮುಖ ಕೇಂದ್ರವಾದ ಸಂಸತ್ ಪ್ರವೇಶಿಸಿದ್ದಾರೆ. ಬಂದೂಕಿನಿಂದ ಬೆದರಿಕೆ ಒಡ್ಡುತ್ತಿದ್ದ ಫೂಲನ್‌ದೇವಿ ಅದೇ ಜನರ ಮತ ಯಾಚಿಸಿ ಗೆದ್ದದ್ದು ಪ್ರಜಾಪ್ರಭುತ್ವದ ಪ್ರಮುಖ ಅಂಶಗಳಲ್ಲಿ ಒಂದು ಎನ್ನಬಹುದೇ? 'ಬ್ಯಾಂಡಿಟ್ ಕ್ವೀನ್' ಸಿನಿಮಾದ ಅನುತಾಪದ ಅಲೆ ಫೂಲನ್ ದೇವಿಗೆ ನೆರವಾಯಿತೆನ್ನಬಹುದು. ಆದರೆ ಪಂಜಾಬಿನಲ್ಲಿ ಶಾಂತಿ ನೆಲೆಸಲು ತಮ್ಮ ಜೀವನವನ್ನೇ ಗುಂಡಿಗೆ ಅರ್ಪಿಸಿದ ಮಾಜಿ ಮುಖ್ಯಮಂತ್ರಿ ಬೇಅಂತ್ ಸಿಂಗ್ ಅವರ ಹತ್ಯೆಯ ಅನುತಾಪದ ಅಲೆ ಅವರ ಪತ್ನಿ ಜಸ್ವಂತ್ ಕೌರ್‌ಗೆ ನೆರವು ನೀಡಲಿಲ್ಲ ಎಂಬುದು ಅಷ್ಟೇ ಗಮನಾರ್ಹ. ಜಸ್ವಂತ್ ಕೌರ್ ಚುನಾವಣೆಯಲ್ಲಿ ಸೋತರು.

'ತಾರಾಬಲ'ವು ಪ್ರತಿ ಚುನಾವಣೆಯಲ್ಲಿಯೂ ಪಾತ್ರ ವಹಿಸಲು ಯತ್ನಿಸುತ್ತದೆ. ತಮಿಳುನಾಡಿನಲ್ಲಿ ಮತದಾರರು ರಜನೀಕಾಂತ್ ಕರೆಗೆ ಓಗೊಟ್ಟಿರಬಹುದು. ಆದರೆ ತಾರೆಯರು ಮಾಡಿದ್ದೇನು ಎಂದು ಹೇಳುತ್ತಾ ಅವರು ಜಯಲಲಿತಾ, ರೇವತಿಯನ್ನು ಸೋಲಿಸಿದ್ದಾರೆ. ವೈಜಯಂತಿಮಾಲಾ ಬಾಲಿ ಸಂಸತ್ ಸದಸ್ಯೆ. ಆದರೆ ಅವರ ಧ್ವನಿಯನ್ನು ನಾವು ಕೇಳಿಯೇ ಇಲ್ಲವಲ್ಲ ಎಂಬುದು ಮತದಾರರ ಅಭಿಮತ. ಆದರೆ ಪಕ್ಷದೊಂದಿಗೆ ಸತತವಾಗಿ ಗುರುತಿಕೊಂಡಿದ್ದ 'ಊರ್ವಶಿ' ಶಾರದಾ (ತೆಲಗು ದೇಶಂ ನಾಯ್ಡು ಬಳಗ) ಗೆದ್ದದ್ದು ಗಮನಾರ್ಹ. ತಮಿಳು ನಾಡಿನಲ್ಲಿ ಏಕೈಕ ಮಹಿಳಾ ಅಭ್ಯರ್ಥಿಯೂ ಗೆಲ್ಲಲಿಲ್ಲ ಎಂಬುದು ಗಮನಿಸಬೇಕಾದ ಸಂಗತಿ.

ತಮಿಳುನಾಡು ವಿಧಾನಸಭೆಯಂತೆ ಕೇರಳದ ವಿಧಾನಸಭೆ ಕೂಡ ಕುತೂಹಲ ಉಂಟು ಮಾಡಿತ್ತು. ಕೇರಳದಲ್ಲಿ

ಮುಖ್ಯಮಂತ್ರಿ ಯಾರಾಗಬಹುದೆಂಬ ಆಸೆ ಇನ್ನು ಹೆಚ್ಚಾಗಿತ್ತು. ಪಕ್ಷದ ಹಿರಿಯ ಸದಸ್ಯೆ ಸುಶೀಲಾ ಗೋಪಾಲನ್ ಅವರು ಆ ರಾಜ್ಯದ ಮೊದಲ ಮಹಿಳಾ ಮುಖ್ಯಮಂತ್ರಿಯಾಗಬಹುದೆಂಬ ನಿರೀಕ್ಷೆ ಇಡೀ ದೇಶಕ್ಕೇ ಇತ್ತು. ಆದರೆ ಆ ಪಕ್ಷದ ಒಳರಾಜಕೀಯದಿಂದಾಗಿ ನಾಯನಾರ್ ಮುಖ್ಯಮಂತ್ರಿಯಾಗಿ ಅದು ಬರೀ ಹುಸಿ ನಿರೀಕ್ಷೆಯಾಗೇ ಉಳಿಯಿತು.

ಕರ್ನಾಟಕದಿಂದ ಒಬ್ಬ ಮಹಿಳೆ ಮಾತ್ರ ಲೋಕಸಭೆ ಪ್ರವೇಶಿಸಿದ್ದಾರೆ. ಸುಮಾರು 1.12 ಲಕ್ಷ ಮತಗಳಿಂದ ಮಾಜಿ ಕೇಂದ್ರ ಸಚಿವ ಶಂಕರಾನಂದ ಅವರನ್ನೂ ಸೋಲಿಸಿದ, ರಾಜಕೀಯಕ್ಕೆ ಹೊಸಬರಾದ ರತ್ನಮಾಲಾ ಧಾರೇಶ್ವರ ಸವಣೂರ್ ಅವರು ಈ ಏಕೈಕ ಮಹಿಳಾ ಪ್ರತಿನಿಧಿ. ಹಿಂದಿನ ಲೋಕಸಭೆಯಲ್ಲಿ ಸದಸ್ಯರಾಗಿದ್ದ ಬಸವರಾಜೇಶ್ವರಿ ಮತ್ತು ಚಂದ್ರಪ್ರಭಾ ಅರಸು ಅವರಿಗೆ ಈ ಬಾರಿ ಟಿಕೇಟ್ ಸಿಗಲಿಲ್ಲ. ಸ್ಪರ್ಧಿಸಿದ್ದ ಡಿ.ಕೆ. ತಾರಾದೇವಿ ಸೋತರು. ನಾಲ್ಕು ಬಾರಿ ಕಾರ್ಪೊರೇಷನ್ ಚುನಾವಣೆಯಲ್ಲಿ ಸತತವಾಗಿ ಗೆದ್ದು ಬಂದು ಈ ಬಾರಿ ಲೋಕಸಭಾ ಚುನಾವಣೆಯಲ್ಲಿ ಸೋತರೂ 72,000 ಮತಗಳನ್ನು ಪಡೆದ ಚಿಕ್ಕಮಗಳೂರಿನ ರಾಧಾ ಸುಂದರೇಶ್(ಸಿ.ಪಿ.ಐ.) ನಿಜಕ್ಕೂ ಅಭಿನಂದನಾರ್ಹರು. ಹಣದ ಹೊಳೆಯೇ ಹರಿದ ಚಿಕ್ಕಮಗಳೂರಿನ ಚುನಾವಣೆಯಲ್ಲಿ ತಾವು ಮಾಡಿದ ಕಾರ್ಯ ಹಾಗೂ ಜನಸಂಪರ್ಕವಷ್ಟನ್ನೇ ಬಂಡವಾಳವನ್ನಾಗಿಸಿಕೊಂಡಿರುವ ರಾಧಾರವರಿಗೆ ದೊರೆತ ಮತಗಳು ಅವರ ಕಾರ್ಯಕ್ಷಮತೆಗೆ ಸಾಕ್ಷಿ.

ಪಕ್ಷಗಳ ವರ್ಚಸ್ಸು, ಕೆಲಬಾರಿ ವೈಯಕ್ತಿಕ ವರ್ಚಸ್ಸು, ಪಕ್ಷದಲ್ಲಿ ಪರಿಶ್ರಮ, ಜನರ ಬಳಿ ಹೋಗಿ ಕೆಲಸ ಮಾಡುವ ಪ್ರವೃತ್ತಿ ಇವೇ ಮುಂತಾದವು ಅಭ್ಯರ್ಥಿ ಜಯಕ್ಕೆ ನೆರವಾಗಬಲ್ಲವು. ಆದರೆ 'ಶೇಷನ್ ಕಡಿವಾಣದ, ಮಧ್ಯೆಯೂ ಹಣದ ಪ್ರಭಾವ ಚುನಾವಣೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವುದು ಸುಳ್ಳಲ್ಲ. ರಾಜಕೀಯ ಪಕ್ಷಗಳೂ ಮಹಿಳಾ ಅಭ್ಯರ್ಥಿಗಳ ಬಗೆಗೆ ಉದಾಸೀನ ತಾಳುವುದಷ್ಟೇ ಅಲ್ಲ, ಟಿಕೆಟ್ ನಿರಾಕರಿಸುವಾಗ 'ಗೆಲ್ಲುವ ಅಭ್ಯರ್ಥಿ'ಗೇ ಕೊಡುತ್ತಿದ್ದೇವೆ ಎಂದು ಹೇಳಿ ಬಿಡುತ್ತವೆ. ಗೆದ್ದೇ ಗೆಲ್ಲುವ ಕ್ಷೇತ್ರಗಳಿಗೆ ಅಭ್ಯರ್ಥಿ ಆರಿಸುವಾಗ ಮಹಿಳೆಯರು ಕಾಣುವುದೇ ಇಲ್ಲ. ಇದರ ಜೊತೆಗೆ ' ಗೂಂಡಾ ರಾಜಕಾರಣ' ದಿಂದಾಗಿ ಅನೇಕ ಮಹಿಳೆಯರು ರಾಜಕೀಯದಿಂದ ದೂರವೇ ಉಳಿಯುತ್ತಾರೆ.

• ದೇವಿ

## 'ಸುಸಂಸ್ಕೃತ'ರ ನಡವಳಿಕೆ

ಮಾತೆಯರಿಗೆ ಎಲ್ಲಿಲ್ಲದ ಮನ್ನಣೆ ನೀಡುವವರು ತಾವೆಂದು ಹೇಳಿಕೊಳ್ಳುವ ಭಾರತೀಯ ಜನತಾ ಪಕ್ಷದ ಕಾರ್ಯಕರ್ತರು ಅದರ ಅರ್ಥವನ್ನು ಅಹಮದಾಬಾದಿನಲ್ಲಿ ಮೇ 20 ರಂದು ಪ್ರಾಯೋಗಿಕವಾಗಿ ತೋರಿಸಿಕೊಟ್ಟ ದುರ್ಘಟನೆ ವರದಿಯಾಗಿದೆ. ರಾಷ್ಟ್ರೀಯ ಸ್ವಯಂ ಸೇವಕ ಸಂಘ ಹಾಗೂ ಅವರ ಬೇರೆ ಪರಿವಾರದ ಮಂದಿ ಅಂದು ಸಂಜೆ ಅಟಲ ಬಿಹಾರಿ ವಾಜಪೇಯಿ ಭಾಷಣ ಮಾಡಿದ ಸಭೆಯಲ್ಲಿ ಅತ್ಯಂತ ಭೀಕರವಾದ ದುರ್ನಡತೆಯನ್ನು ತೋರಿಸಿದರು. ಆ ಪಕ್ಷದ ಆಂತರಿಕ ಘರ್ಷಣೆಗಳು ಇಂತಹ ಖಂಡನೀಯವಾದ ವರ್ತನೆಗೆ ಮೂಲಕಾರಣವೆಂದು ಹೇಳಲಾಗಿದೆ. ಆದರೆ ಅದರ ಪರಿಣಾಮವನ್ನು ಹಲವು ಮಹಿಳೆಯರು ಅನುಭವಿಸಬೇಕಾಗಿ ಬಂದಿತು.

ತಮ್ಮನ್ನು ಲೋಕಸಭೆಗೆ ಆಯ್ಕೆ ಮಾಡಿದ್ದಕ್ಕೆ ಜನಕ್ಕೆ ಕೃತಜ್ಞತೆ ತಿಳಿಸಲು ಆಗ್ಗೆ ಪ್ರಧಾನಿಯಾಗಿದ್ದ ವಾಜಪೇಯಿ ಅಲ್ಲಿಗೆ ತೆರಳಿ ಭಾಷಣ ಮಾಡುವುದಿತ್ತು. ಭಾಷಣ ಮಾಡಿ ಅವರು ವೇದಿಕೆಯಿಂದ ಇಳಿದಿದ್ದೇ ತಡ, ಪರಿವಾರದ ಕೆಲವು ಕಾರ್ಯಕರ್ತರು ಮೊದಲು ಗುಜರಾತಿನ ಪಂಚಾಯಿತಿ ಸಚಿವ ಆತ್ಮಾರಾಂ ಪಟೇಲರನ್ನು ಚೆನ್ನಾಗಿ ಥಳಿಸಿ ಬಟ್ಟೆ ಕಳಚಿ ಹಾಕಿದರು. ಆತ ಬರೀ ಚೆಡ್ಡಿಯಲ್ಲಿ ಓಡಿಹೋಗಲು ಯಾರೋ ಪೊಲೀಸಿನವ ಸಹಾಯಮಾಡಿದ. ಇನ್ನೊಬ್ಬ ಸಚಿವರು ಅಲ್ಲೇ ಇದ್ದ ಪರದೆಯನ್ನು ಹರಿದುಕೊಂಡು ಮೈಮುಚ್ಚಿಕೊಳ್ಳುವುದರಲ್ಲಿ ಸಫಲರಾದರು! ಇನ್ನಿಬ್ಬರು ಸಚಿವರು ಎದ್ದೆನೋ, ಬಿದ್ದೆನೋ ಎಂದು ಪರಾರಿಯಾದರು.

ಇದಾದ ನಂತರ ಕೆಲವು ಮಂತ್ರಿಗಳ ಹಾಗೂ ಭಿನ್ನಮತೀಯ ಶಾಸಕರ ಪತ್ನಿಯರ ಮೇಲೆ "ಸುಸಂಸ್ಕೃತ" ಪರಿವಾರದ ಕಾರ್ಯಕರ್ತರು ಎರಗಿದರು. ಪೊಲೀಸರಿಂದ ಆ ಮಹಿಳೆಯರಿಗೆ ಯಾವ ಸಹಾಯವೂ ಸಿಕ್ಕಲಿಲ್ಲ. ಆ ಮಹಿಳೆಯರನ್ನು ತಳ್ಳಾಡಿ, ಅವರ ಸೀರೆಗಳನ್ನು ಹಿಡಿದೆಳೆದು, ಅವರನ್ನು ವಿವಸ್ತ್ರರನ್ನಾಗಿಸುವ ದುಷ್ಕೃತ್ಯದಲ್ಲಿ ಈ ಮಂದಿ ತೊಡಗಲಿದ್ದರು. ಇದನ್ನು ನೋಡಿದ ಸಭಿಕರಲ್ಲಿ ಕೆಲವರು ಸಂಘ ಪರಿವಾರದ ದುಷ್ಕರ್ಮಿಗಳನ್ನು ತಡೆದು ಮಹಿಳೆಯರಿಗೆ ಸ್ವಲ್ಪ ರಕ್ಷಣೆ ನೀಡಿ ಆ ಸ್ಥಳದಿಂದ ಓಡಿಹೋಗಲು ಅನುವು ಮಾಡಿಕೊಟ್ಟರು. ಹೀಗೆ ಮಧ್ಯಪ್ರವೇಶ ಮಾಡಿದ ಜನ ಅತಿಸಾಮಾನ್ಯ ವರ್ಗದವರೆಂದು ವರದಿಯಾಗಿದೆ.

ವಾಜಪೇಯಿಯವರ ಮೂರನೆಯ ದಿನದ ರಾಜ್ಯಭಾರದಲ್ಲಿ ಇಂತಹ ಹೀನಕೃತ್ಯದಲ್ಲಿ ತೊಡಗಿದ ಸಂಘ ಪರಿವಾರದವರು ಅಧಿಕಾರದಲ್ಲಿ ಮುಂದುವರಿದಿದ್ದರೆ ಇನ್ನೇನೇನು ಮಾಡಲಿದ್ದರೆಂಬುದನ್ನು ಊಹಿಸಿಕೊಳ್ಳಬಹುದಾಗಿದೆ. ಪ್ರಶ್ನಾರ್ಹವಾದ ಇನ್ನೊಂದು ವಿಷಯವೆಂದರೆ ವಾಜಪೇಯಿ ಪಕ್ಷದ ಶ್ರೀಮತಿ ಸುಷ್ಮಾ ಸ್ವರಾಜ್ ಈ ಬಗ್ಗೆ ಚಕಾರವನ್ನೇ ಎತ್ತಲಿಲ್ಲವೆಂಬುದು. ಅಸಂಸ್ಕೃತರ ಹಲ್ಲೆಯ ಪರಿಚಯವಿದ್ದ ಮಹಿಳೆಯರಿಗೆ ಈಗ ಸುಸಂಸ್ಕೃತರ ಹಲ್ಲೆಯ ನೇರ ಪರಿಚಯವೂ ಆಗಿದೆ!

• ಜೆ.ಆರ್.

# ಲೀಲಾಬಾಯಿ ಕಾಮತ್ - ವ್ಯಕ್ತಿತ್ವ - ಸಾಹಿತ್ಯ

ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯಪೂರ್ವದ ಪ್ರಮುಖ ಲೇಖಕಿಯರಲ್ಲಿ ಲೀಲಾಬಾಯಿ ಕಾಮತ್ ಅವರೂ ಒಬ್ಬರು. ೧೯೧೧ರ ಅಕ್ಟೋಬರ್ ೧೫ ರಂದು ಜನಿಸಿದ ಲೀಲಾಬಾಯಿ ಕಾಮತ್‌ರಿಗೆ ಅವರ ೧೧ನೇಯ ವಯಸ್ಸಿನಲ್ಲಿ ವಿವಾಹವಾಯಿತು. ಕೇವಲ ಐದನೆಯ ತರಗತಿಯವರೆಗೆ ಆಗಿದ್ದ ವಿದ್ಯಾಭ್ಯಾಸ ವಿವಾಹದಿಂದಾಗಿ ನಿಂತುಹೋದರೂ, ಕಲಿಯುವ ಅವರ ಆಸಕ್ತಿಗೆ ವಿವಾಹ ಅಡ್ಡಿಯಾಗಲಿಲ್ಲ. ಮಕ್ಕಳು ದೊಡ್ಡವರಾದ ಮೇಲೆ ಹಿಂದಿ ಪ್ರಥಮ, ಮಧ್ಯಮ ಹಾಗೂ ರಾಷ್ಟ್ರಭಾಷಾ ಪರೀಕ್ಷೆಗಳಿಗೆ ಕಟ್ಟಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದರು. ಮನೆಭಾಷೆ ಕೊಂಕಣಿಯಾದರೂ ಕನ್ನಡ, ಮರಾಠಿ, ಹಿಂದಿ ಇಂಗ್ಲೀಷ್ ಭಾಷೆಗಳಲ್ಲೂ ಪ್ರಾವೀಣ್ಯ ಪಡೆದುಕೊಂಡರು. ಸ್ವಾವಲಂಬತನ, ಸ್ವಾಭಿಮಾನ, ಆತ್ಮವಿಶ್ವಾಸಗಳು ಅವರ ವ್ಯಕ್ತಿತ್ವದ ವಿಶಿಷ್ಟತೆಗಳು. ೮೪ರ ಈ ಇಳಿವಯಸ್ಸಿನಲ್ಲೂ ತಮಗೆ ಬಂದ ಪತ್ರಗಳಿಗೆಲ್ಲ ಖುದ್ದಾಗಿ ತಾವೇ ಉತ್ತರಿಸುತ್ತಾರೆ; ಸಾಹಿತ್ಯದ ಕುರಿತು ಮಾತಾಡುವುದೆಂದರೆ ಅವರ ಕಣ್ಣಲ್ಲಿ ಹೊಳಪು ಮೂಡುತ್ತದೆ. ಆಯಾಸ ದೂರ ಓಡುತ್ತದೆ.

ಲೀಲಾಬಾಯಿ ಕಾಮತ್ ಅವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ್ದು ೧೯೪೦ರಲ್ಲಿ. ಅನುವಾದ ಕತೆಗಳ ಮೂಲಕ. ವೈಯಕ್ತಿಕ ಆಸಕ್ತಿಯಿಂದ ಬಿಡುವಿನಲ್ಲಿ 'ಅಡಿಗೆ ಮನೆ' ಯಲ್ಲಿ ಆರಂಭವಾದ ಈ ಸಾಹಿತ್ಯ ಕಾರ್ಯ ಮುಂದೆ ಅವರಿಗೆ ಸ್ವತಂತ್ರ ಕತೆಗಳನ್ನು ಬರೆಯಲು ಪ್ರೇರಣೆ ನೀಡಿ, ಅದರ ಫಲವಾಗಿ ಮೂಡಿ ಬಂದ ಕೃತಿಗಳೆಂದರೆ

೧. ಹಾರಿಹೋದ ಹಕ್ಕಿ (೧೯೫೦)

೨. ನಮ್ಮೂರ ಶಿವಪಾರ್ವತಿ (೧೯೫೭)

ಅವರ ಅನುವಾದ ಹಾಗೂ ಸ್ವತಂತ್ರ ಕತೆಗಳ ವಿಶಿಷ್ಟತೆಯನ್ನು ಪರಿಚಯಿಸುವುದು ಈ ಲೇಖನದ ಉದ್ದೇಶ.

**ಅನುವಾದ ಕತೆಗಳು:**

ಲೀಲಾಬಾಯಿ ಕಾಮತ್ ಅವರು ನೂರಕ್ಕೂ ಮಿಕ್ಕು ವಿವಿಧ ಭಾಷೆಗಳಿಂದ ಕತೆಗಳನ್ನು ಅನುವಾದ ಮಾಡಿದ್ದಾರೆ. ಹಿಂದಿ ಸಾಹಿತ್ಯದಿಂದ ಹೆಚ್ಚಿನ ಕತೆಗಳನ್ನು ಅನುವಾದ ಮಾಡಿದ್ದರೂ, ಇವುಗಳೊಂದಿಗೆ ಮರಾಠಿ ಹಾಗೂ ಇಂಗ್ಲೀಷ್ ಸಾಹಿತ್ಯದಿಂದಲೂ ಕತೆಗಳನ್ನು ಅನುವಾದಿಸಿದ್ದಾರೆ. ಇಂಥ ಅನುವಾದ ಕತೆಗಳ ವಸ್ತು ವೈವಿಧ್ಯಮಯವಾಗಿದೆ.

ರೂಢಿಗತ ನಂಬಿಕೆ - ಸಂಪ್ರದಾಯಗಳ ಹಿಂದಿನ ಅಸಾಂಗತ್ಯವನ್ನು ಬಯಲಿಗೆಳೆವ, ಗೇಲಿ ಮಾಡುವ ಧಾಟಿಯ ಕತೆಗಳು ಇರುವಂತೆಯೇ ಭೂತ ಚೇಷ್ಟೆ ಮುಂತಾದ ಮೂಢ ನಂಬಿಕೆಗಳನ್ನು ಪುನರ್‌ಸ್ಥಾಪಿಸುವ ಮಾದರಿಯ ಕತೆಗಳನ್ನೂ ಅವರೇ ಅನುವಾದ ಮಾಡಿದ್ದಾರೆ. ಪುರುಷ ಪ್ರಧಾನ ಸಮಾಜದ ರೂಢಿಗತ ಮೌಲ್ಯಗಳನ್ನು ಒಪ್ಪಿಕೊಂಡು, ಪ್ರೇಮಿಯ ಸಾವಿನ ಸುದ್ದಿ ತಿಳಿದು ಸತಿ ಹೋದ ಹೆಣ್ಣಿನ ಬದುಕನ್ನು ಕೀರ್ತಿಸುವ 'ಹಿಂದೂ ಸ್ತ್ರೀ' ಯಂಥ ಕತೆ ಒಂದು ತುದಿಯಾದರೆ, ವರದಕ್ಷಿಣೆಯಂಥ ಸಾಮಾಜಿಕ ಪಿಡುಗಿಗೆ ಹೆದರಿ ಕುಗ್ಗದೆ, ಸ್ವಾವಲಂಬನೆ, ಸ್ವಾಭಿಮಾನಗಳ ಮೂಲಕ ಹೆಣ್ಣು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡು ಬದುಕನ್ನು ಎದುರಿಸಿ ನಿಲ್ಲುವ 'ಬಡವರ ಹುಡುಗಿ' ಕತೆಯದು ಇನ್ನೊಂದು ತುದಿ ಎನ್ನಬೇಕು.

'ದೇವರ ದಂಗೆ' ದೇವರುಗಳನ್ನು ಲೇವಡಿ ಮಾಡುವ ಧಾಟಿಯದು. ಮನೆಯಾಕೆ ಬುಟ್ಟಿಯಲ್ಲಿ ಇಟ್ಟ ದೇವರ ವಿಗ್ರಹಗಳೆಲ್ಲ ಕಚ್ಚಾಡುವ ಪ್ರಸಂಗ ಕತೆಯ ಪ್ರಧಾನ ಭಾಗ. ಇಲ್ಲಿ ನಾಸ್ತಿಕ ಭಾವದಿಂದ ಆರಂಭವಾಗುವ ಕತೆ ಕೊನೆಯಲ್ಲಿ ಆಸ್ತಿಕ ಭಾವಕ್ಕೆ ತಿರುಗಿಕೊಳ್ಳುತ್ತದೆ. ಎಂದರೆ ಲೇಖಕಿ ಅನುವಾದಕ್ಕೆ ಕತೆಗಳನ್ನು ಆಯ್ಕೆ ಮಾಡಿಕೊಳ್ಳುವಾಗ ಯಾವುದೇ ನಿರ್ದಿಷ್ಟ ಬದ್ಧತೆಗೆ ಒಳಗಾಗಿಲ್ಲ. ವೈಚಾರಿಕ ನಿಲುವಿನ ಕತೆಗಳನ್ನೂ, ಮೂಢನಂಬಿಕೆಗಳ ಪರ ವಕಾಲತ್ತು ಮಾಡುವ ಕತೆಗಳನ್ನು ಏಕಕಾಲಕ್ಕೆ ಅನುವಾದಕ್ಕೆ ಎತ್ತಿಕೊಳ್ಳಲಾಗಿದೆ. ಕತೆಯ ನಿರೂಪಣಾ ಶೈಲಿ, ತಂತ್ರ ಇವು ಕೂಡಾ ಕತೆಯ ಆಯ್ಕೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಹೀಗಾಗಿ ಪತ್ತೆದಾರಿ ಮಾದರಿಯ ಕತೆಗಳೂ, ಪ್ರೀತಿ - ಪ್ರೇಮದ ಕುರಿತ ತೀರ ಸಾಮಾನ್ಯ ಕತೆಗಳೂ ಅನುವಾದದಲ್ಲಿ ಸೇರ್ಪಡೆಯಾಗಿವೆ. ಚಿತ್ರನಟಿಯಾಗಿ ರೂಪುಗೊಂಡು ಭಾವನಾ ದೇವಿಯ ಒಳತೋಟಿಯನ್ನು ಚಿತ್ರಿಸುವ 'ಅವಳ ರಹಸ್ಯ' ಗಂಭೀರ ಕತೆಯಾಗಿದೆ. ಇವರ ಹೆಚ್ಚಿನ ಅನುವಾದ ಕತೆಗಳಲ್ಲಿ ಸ್ತ್ರೀ ಪಾತ್ರ ಪ್ರಧಾನವಾಗಿದ್ದು, ವಿಭಿನ್ನ ವರ್ಗದ, ಸಂಸ್ಕೃತಿಯ, ವಯೋಮಾನದ ಮಹಿಳೆಯ ಸಂವೇದನೆಗಳನ್ನು ಮುಂದಿಡುತ್ತವೆ. ಇನ್ನೊಂದು ಗಮನಾರ್ಹ ಅಂಶವೆಂದರೆ, ಹೆಚ್ಚಿನ ಅನುವಾದ ಕತೆಗಳು ಅನ್ಯಭಾಷೆಯಿಂದ ಅನುವಾದಗೊಂಡ ಕತೆಗಳು ಎನಿಸದೆ, ಸ್ವತಂತ್ರ ಕತೆಗಳೇನೋ ಎಂಬಷ್ಟು ಸಹಜವಾಗಿ, ಸುಂದರವಾಗಿ ಮೂಡಿ ಬಂದಿವೆ. ಇದಕ್ಕೆ, ಪಾತ್ರಗಳ ಹೆಸರು, ಪ್ರದೇಶ, ಸಂಸ್ಕೃತಿ ಹೀಗೆ ಕತೆಯ ಹಂದರವನ್ನೇ (ಹೆಚ್ಚಿನ ಸಂದರ್ಭಗಳಲ್ಲಿ) ಲೇಖಕಿ ದೇಶೀಯವಾಗಿ ಪರಿವರ್ತಿಸಿರುವುದು ಹಾಗೂ ಇವು ಅಕ್ಷರಶಃ ಅನುವಾದಗಳಾಗಿರದೆ ಭಾವಾನುವಾದಗಳಾಗಿರುವುದೂ ಮುಖ್ಯ ಕಾರಣಗಳು.

## ಸ್ವತಂತ್ರ ಕತೆಗಳು:

'ಹಾರಿಹೋದ ಹಕ್ಕಿ' (೧೯೫೦) ಮತ್ತು 'ನಮ್ಮೂರ ಶಿವಪಾರ್ವತಿ' (೧೯೫೬) ಅವರ ಕಥಾ ಸಂಕಲನಗಳು. ಇವುಗಳಲ್ಲಿ ಒಟ್ಟು ೧೬ ಕತೆಗಳಿವೆ. ಪ್ರೀತಿ, ಸಹನೆ, ತ್ಯಾಗ, ಸೇವೆ, ಕರ್ತವ್ಯ ಮುಂತಾದ ಮೌಲ್ಯಗಳನ್ನು ನಂಬಿ ಬದುಕಿದವರೇ ಈ ಸಂಕಲನಗಳ ಅನೇಕ ಕತೆಗಳ ಕೇಂದ್ರ ಪಾತ್ರಗಳು. ಕರ್ಮಸಿದ್ಧಾಂತ, ವರ್ಣಾಶ್ರಮ ನೀತಿ ಮುಂತಾದವು ಇವರ ಕತೆಗಳಲ್ಲಿ ಪರೀಕ್ಷೆಗೆ, ಟೀಕೆಗೆ ಗುರಿಯಾಗಿವೆ. 'ಹುಟ್ಟಿನಿಂದಲೇ ಯಾರೂ ಉಚ್ಚರೂ ನೀಚರೂ ಆಗಲಾರರು; ವ್ಯಕ್ತಿಗೆ ಸಂಸ್ಕಾರ ಎಂಬುದು ಹುಟ್ಟಿದ ಜಾತಿಯಿಂದ ಬರದೆ ಅದನ್ನು ರೂಢಿಸಿಕೊಳ್ಳುವಿಕೆಯಿಂದ ಬರುತ್ತದೆ. ಕಾಮಾಲೆ ಕಣ್ಣಿನ ಸಮಾಜ ಮಾತ್ರ ಅದನ್ನು ಅರ್ಥೈಸಿಕೊಳ್ಳಲಾರದು' ಎಂಬ ವಿಚಾರ 'ಹಾರಿಹೋದ ಹಕ್ಕಿ' ಕತೆಯಲ್ಲಿ ಪ್ರಧಾನವಾಗಿದೆ. ವರ್ಣಾಶ್ರಮ ಹುಟ್ಟು ಹಾಕಿದ ಹುಟ್ಟಿನಿಂದ ಜಾತಿ, ಜಾತಿಗೆ ನಿರ್ದಿಷ್ಟ ವೃತ್ತಿ ಎಂಬ ನಿಲುವು, ಅದೇ ಮುಂದುವರಿದಿದೆ. ಸಂಗೀತ, ನೃತ್ಯ, ವಾದ್ಯ ಮುಂತಾದುವು ಏನಿದ್ದರೂ ಕೆಳವರ್ಗದವರ ವಿದ್ಯೆ ಎಂಬ ಸಾಂಪ್ರದಾಯಿಕ ದೃಷ್ಟಿಕೋನ 'ಸೋದರ ಮಾವ' ಕತೆಯಲ್ಲಿ ಟೀಕೆಗೆ ಒಳಗಾಗಿದೆ. ಇಂಥ ರೂಢಿಗತ ನಂಬಿಕೆಗಳನ್ನೇ ನೆಚ್ಚಿಕೊಂಡು ತನ್ನ ಮಗನನ್ನೇ ಶಾಶ್ವತವಾಗಿ ಕಳೆದುಕೊಳ್ಳಬೇಕಾಗಿ ಬಂದ ನಾರ್ಣಪ್ಪನ ತಲ್ಲಣದ ಮೂಲಕ ಲೇಖಕಿ ತನ್ನ ಪ್ರಗತಿಪರತೆಯನ್ನು ಸೂಚಿಸುತ್ತಿದ್ದಾರೆ.

ಆಧುನಿಕ ಶಿಕ್ಷಣ ಪದ್ಧತಿ ಹಾಗೂ ವಿಜ್ಞಾನದ ಆವಿಷ್ಕಾರಗಳ ಬಗ್ಗೆ ಲೇಖಕಿ ವಿಶೇಷ ಕಾಳಜಿ ಹೊಂದಿದ್ದರು. ಹೀಗಾಗಿ ಇಂಗ್ಲೀಷ್ ವಿದ್ಯಾಭ್ಯಾಸ, ಕಾಲೇಜು ಶಿಕ್ಷಣ ಪಡೆದ ಸ್ತ್ರೀಯರು ಇವರ ಕತೆಗಳಲ್ಲಿ ವಿಡಂಬನೆಗೆ ಒಳಗಾಗದೆ, ಕುಟುಂಬದ ಹಾಗೂ ಪರಿಸರದ ಬದಲಾವಣೆಗೆ, ಊರ್ಧ್ವಮುಖಿ ಚಲನೆಗೆ ಕಾರಣರಾಗುತ್ತಾರೆ. ಮಲತಾಯಿಯೂ ಸಾಂಪ್ರದಾಯಿಕ ದೃಷ್ಟಿಕೋನದಂತೆ ಕಠೋರಿಯಾಗದೆ, ಈ ಕಾರಣಕ್ಕೇ ಮಲಮಕ್ಕಳ ಹಾಗೂ ಮನೆಯವರೆಲ್ಲರ ಪ್ರೀತಿ ಗಳಿಸುವಲ್ಲಿ ಯಶಸ್ವಿಯಾಗುತ್ತಾಳೆ. ತನ್ನ ಅತ್ತಿಗೆಯಂದಿರಲ್ಲಿ ಅವ್ಯಕ್ತವಾಗಿದ್ದ ಪ್ರತಿಭೆ ಹಾಗೂ ಆತ್ಮವಿಶ್ವಾಸಗಳನ್ನು ಜಾಗೃತಗೊಳಿಸಿ, ಅವೇ ಸ್ತ್ರೀಯ ವ್ಯಕ್ತಿತ್ವದ ಸೌಂದರ್ಯಕ್ಕೆ ಪ್ರಧಾನ ಗುಣಗಳು ಎಂದು ಮನವರಿಕೆ ಮಾಡಿಕೊಡುತ್ತಾನೆ. ಆ ಮೂಲಕ ಕುಟುಂಬದವರೆಲ್ಲರ ಕಣ್ಣಿನ ಪೊರೆಯನ್ನು ಕಳಚಿ ಹೊಸ ಬದುಕನ್ನು ಸೂಚಿಸುವವಳಾಗುತ್ತಾಳೆ.

ವಿಧವಾ ಸಮಸ್ಯೆಯ ಸಂದರ್ಭದಲ್ಲಿ ಮಾತ್ರ ಲೇಖಕಿಯದು ರಕ್ಷಣಾವಾದಿ ನಿಲುವು. ವಿಧವೆಯ ಅಸ್ಥಿರ ಬದುಕಿಗೆ, ಎಲ್ಲ ನೋವುಗಳಿಗೆ ಬಂಧು ಬಾಂಧವರೇ ಕಾರಣ ಎಂಬುದನ್ನು ನಿಷ್ಠುರವಾಗಿ 'ವಿಧವೆಯ ಬಾಳು' ಕತೆ ಪ್ರತಿಪಾದಿಸುತ್ತದೆ. ವಿಧವೆಗೆ ಮರು ವಿವಾಹದ ಸಾಧ್ಯತೆಯನ್ನು ಕಲ್ಪಿಸಿಕೊಳ್ಳಲಾರದ ಕಾರಣಕ್ಕೆ, ಇಲ್ಲಿ ಸುಧಾರಕನಾಗಿ ಮೂಡಿ ಬರಬಹುದಾಗಿದ್ದ ಯುವಕನೊಬ್ಬನ ಪಾತ್ರ ಪುಂಡನಾಗಿ, ದುಷ್ಟನಾಗಿ, ಕಾಮುಕನಾಗಿ ರೂಪುಗೊಂಡಿದೆ. ಇಂಥ ಬದುಕಿಗಿಂತ ಹಿಂದಿನ ಸತೀಕ್ರಮವೇ ಎಷ್ಟೋ ಒಳ್ಳೆಯದಿತ್ತು ಎಂದು ವಿಧವೆ ಆಶಿಸುತ್ತಾಳೆ. ಈ ರೀತಿಯ ಚಿತ್ರಣಕ್ಕೆ ವಿಧವಾ ವಿವಾಹವನ್ನು ಒಪ್ಪಿಕೊಳ್ಳಲಾರದ ಸಾಂಪ್ರದಾಯಿಕ ದೃಷ್ಟಿಕೋನವೇ ಕಾರಣ ಎಂಬುದು ಸುಸ್ಪಷ್ಟ. ಲೇಖಕಿಯ ಇಂಥ ಧೋರಣೆಯನ್ನು ಇವರ ಅನುವಾದ ಕತೆಗಳಲ್ಲೂ ಗುರುತಿಸಬಹುದು. ಹೀಗೆಂದ ಮಾತ್ರಕ್ಕೆ ವಿಧವೆ ಕಠೋರ ನಿಯಮ ವ್ರತಾಚರಣೆ ಕೈಗೊಳ್ಳಬೇಕು ಎಂಬ ಪ್ರತಿಗಾಮಿ ನಿಲುವು ಲೇಖಕಿಯದಲ್ಲ. ವಿಧವೆಯೂ ಕಾಲಧರ್ಮಕ್ಕೆ ಅನುಗುಣವಾಗಿ ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಬೇಕು, ತನ್ನನ್ನು ತೊಡಗಿಸಿಕೊಳ್ಳಬೇಕು ಎಂಬ ನಿಲುವನ್ನು ಪ್ರತಿಪಾದಿಸುತ್ತಾರೆ. ಜಪ-ತಪಗಳಿಗೆ ಬದಲಾಗಿ ಗಾಂಧೀಸ್ಮರಣೆ ಮಾಡುವ, ಮಡಿ-ಮೈಲಿಗೆಗಳ ಬದಲಾಗಿ ಶುಚಿತ್ವಕ್ಕೆ ಒತ್ತುಕೊಡುವ, ಧರ್ಮ-ಜಾತಿ, ಸಂಪ್ರದಾಯದ ಚೌಕಟ್ಟನ್ನು ಮೀರಿ ಮಾನವೀಯತೆಯನ್ನು ಮೆರೆಯುವ ವಿಧವಾ ಪಾತ್ರಗಳನ್ನು ಚಿತ್ರಿಸಿದ್ದಾರೆ.

ಹೀಗೆ ಲೀಲಾಬಾಯಿ ಕಾಮತ್ ಅವರ ಪ್ರಗತಿಪರ ಹಾಗೂ ರಕ್ಷಣಾವಾದಿ ನಿಲುವು ಏಕಕಾಲಕ್ಕೆ ಕತೆಗಳಲ್ಲೂ ಪ್ರಕಟಗೊಂಡಿರುವ ಬಗೆ ಅಧ್ಯಯನ ಯೋಗ್ಯ. ಇವು ಒಂದು ಕಾಲದ ನಿರ್ದಿಷ್ಟ ಸಮಾಜದ ಪರಿವರ್ತನೆಯ ಪ್ರತಿಬಿಂಬಗಳೇ ಆಗಿವೆ. 'ಹೆಣ್ಣು ಮಕ್ಕಳು ಉದ್ಧಾರ ಆಗಬೇಕು, ಅದಕ್ಕೆ ಅವರಲ್ಲಿ ಆತ್ಮವಿಶ್ವಾಸ ಮೂಡಿಸುವಂಥ ಕತೆ ಬರೆಯಬೇಕು' ಎಂಬ ಅವರ ಕಾಳಜಿ ಗಮನಾರ್ಹ. ಈ ಕಾರಣಕ್ಕಾಗೇ ಆಂಗ್ಲ ವಿದ್ಯಾಭ್ಯಾಸದ ಬಗ್ಗೆ ಅವರ ಸಮಕಾಲೀನ ಧೋರಣೆಗಳಿಗಿಂತ ಲೀಲಾಬಾಯಿ ಅವರು ಭಿನ್ನರಾಗುತ್ತಾರೆ. ಶಿಕ್ಷಣ, ವೈಜ್ಞಾನಿಕ ಆವಿಷ್ಕಾರಗಳ ಧನಾತ್ಮಕ ಪ್ರಯೋಜನಗಳನ್ನು ಜನರಿಗೆ ಮನವರಿಕೆ ಮಾಡುವ ಉದ್ದೇಶ ಅವರ ಕತೆಗಳಲ್ಲಿ ವ್ಯಕ್ತವಾಗಿವೆ.

• ಡಾ|| ಸಬಿಹಾ ಭೂಮಿಗೌಡ

# ಭಾರತದ ಮೊಟ್ಟಮೊದಲ ವೈದ್ಯೆ - ಕದಂಬಿನಿ ಗಂಗೋಪಾಧ್ಯಾಯ

• ನೇಮಿಚಂದ್ರ

1874ರಲ್ಲಿ ಕಲಕತ್ತೆಗೆ ಆಗಮಿಸಿದ ಅಮೇರಿಕೆಯ ಕ್ಲಾರಾ ಸ್ವೇನ್ ಎಂಬಾಕೆ ಭಾರತಕ್ಕೆ ಬಂದಿಳಿದ ಮೊಟ್ಟ ಮೊದಲ ವೈದ್ಯೆ.

ಆನಂದಿಬಾಯಿ ಜೋಶಿ ವೈದ್ಯಕೀಯ ಪದವಿ ಪಡೆದ ಮೊಟ್ಟಮೊದಲ ಭಾರತೀಯ ಮಹಿಳೆ. 1865ರಲ್ಲಿ ಹುಟ್ಟಿದ ಈಕೆ ಪೂನಾದ ಗಣಪತಿರಾವ್ ಜೋಶಿಯವರ ಮಗಳು. 1883 ರಲ್ಲಿ ಹಡಗಿನಲ್ಲಿ ಅಮೇರಿಕೆಗೆ ಹೋದ ಈಕೆ 1886ರಲ್ಲಿ 'ಫಿಲಡಲ್ಫಿಯಾದ ಮಹಿಳಾ ವೈದ್ಯಕೀಯ ಕಾಲೇಜ್'ನಿಂದ ವೈದ್ಯ ಪದವಿ ಪಡೆದಳು. ಈಕೆಯನ್ನು ಕೊಲ್ಹಾಪುರದ 'ಆಲ್ಬರ್ಟ್ ಎಡ್ವರ್ಡ್ ಆಸ್ಪತ್ರೆ'ಯ ಮಹಿಳಾ ವಾರ್ಡಿಗೆ ವೈದ್ಯರಾಗಿ ಆರಿಸಿದರು. ಆನಂದಿಬಾಯಿ ಭಾರತಕ್ಕೆ ಹಿಂತಿರುಗಿ ಈ ಕೆಲಸವನ್ನು ನಿರ್ವಹಿಸಬಯಸಿದ್ದರು. ಭಾರತದ ಮೊಟ್ಟ ಮೊದಲ ಮಹಿಳಾ ವೈದ್ಯರಾಗಬೇಕಿದ್ದ ಆನಂದಿಬಾಯಿ ಜೋಶಿ, ದುರಾದೃಷ್ಟಕ್ಕೆ 1887ರಲ್ಲಿ ಕ್ಷಯರೋಗಕ್ಕೆ ತುತ್ತಾಗಿ ತೀರಿಕೊಂಡರು. ಈ ಕಾರಣಕ್ಕೆ ಕದಂಬಿನಿ ಗಂಗೋಪಾಧ್ಯಾಯ (ಗಂಗೂಲಿ) ಭಾರತದ ಮೊಟ್ಟಮೊದಲ ಮಹಿಳಾ ವೈದ್ಯರಾಗಿ ಗುರುತಿಸಲ್ಪಡುತ್ತಾರೆ.

ಕದಂಬಿನಿ ಗಂಗೋಪಾಧ್ಯಾಯ ಮೇ 8, 1861 ರಂದು ಹುಟ್ಟಿದರು. (ಈಕೆಯ ಹುಟ್ಟಿದ ವರ್ಷ 1862 ಎಂದು ಕೂಡಾ ಕೆಲವೆಡೆ ಉಲ್ಲೇಖವಾಗಿದೆ). ಆ ಕಾಲದಲ್ಲಿ ಮಹಿಳೆಯರ ವಿದ್ಯಾಭ್ಯಾಸ ಸಾಕಷ್ಟು ಟೀಕೆ, ವಿವಾದಗಳ ವಸ್ತುವಾಗಿತ್ತು. ತನ್ನ ವಿದ್ಯಾಭ್ಯಾಸ ಮುಂದುವರೆಸಲು ಕದಂಬಿನಿ ಬಹಳಷ್ಟು ವಿರೋಧವನ್ನು ಎದುರಿಸಬೇಕಾಯಿತು. ಆದರೆ ತಂದೆ ಬ್ರಜ್‌ಕಿಶೋರ್ ಬೋಸ್ ಮತ್ತು ಪತಿ ಅಬಲಬಾಂಧವ್ ದ್ವಾರಕಾನಾಥ್ ಗಂಗೋಪಾಧ್ಯಾಯ ಅವರ ಪ್ರೋತ್ಸಾಹ, ಪುರೋಗಾಮಿ ಚಿಂತನೆಗಳ ಪ್ರಭಾವ ಕದಂಬಿನಿಗೆ ಬದುಕಿನಲ್ಲಿ ಬಹಳಷ್ಟನ್ನು ಸಾಧಿಸುವ ಅವಕಾಶವನ್ನು ತಂದುಕೊಟ್ಟಿತು. ತಂದೆ ಬ್ರಜ್‌ಕಿಶೋರ್ ಬೋಸ್, ಈಗಿನ ಬಾಂಗ್ಲಾದೇಶದಲ್ಲಿರುವ ತಮ್ಮ ಊರು ಬಾರಿಶಾಲ್ ಬಿಟ್ಟು ಭಾಗಲ್ಪುರದಲ್ಲಿ ಬಂದು ನೆಲೆಸಿದರು. ಈತ ಅಭಯಚರಣ್ ಮಲ್ಲಿಕ್ ಅವರ ಜೊತೆಗೂಡಿ 'ಮಹಿಳಾ ವಿಮೋಚನ ಚಳುವಳಿ' ಯನ್ನು ಹುಟ್ಟುಹಾಕಿ, ಭಾರತದ ಮೊಟ್ಟಮೊದಲ ಮಹಿಳಾ ಸಂಸ್ಥೆಯನ್ನು ಸ್ಥಾಪಿಸಿದರು. ಶ್ರೀ ಅರಬಿಂದೋ ಅವರ ತಂದೆ ಕೃಷ್ಣಧನ್ ಘೋಷ್ ಕೂಡಾ ಈ ಸಮಾಜ ಕಲ್ಯಾಣ ಯೋಜನೆಯಲ್ಲಿ ಭಾಗಿಯಾದರು. ಇಂಥಾ ಪ್ರಗತಿಪರ ವಾತಾವರಣ ಕದಂಬಿನಿಯ ವಿಚಾರಗಳನ್ನು, ವ್ಯಕ್ತಿತ್ವವನ್ನು ರೂಪಿಸಿತು. ಕಂದಬಿನಿಗೆ ವಿದ್ಯಾಭ್ಯಾಸದಲ್ಲಿ ವಿಪರೀತದ ಆಸಕ್ತಿ ಮೂಡಿತು. ತಂದೆ ಕದಂಬಿನಿಯನ್ನು ಬಾಲಿಗಂಜ್‌ನ ಪ್ರತಿಷ್ಠಿತ 'ಹಿಂದೂ ಮಹಿಳಾ ವಿದ್ಯಾಲಯ'ಕ್ಕೆ ಸೇರಿಸಿದರು. ಈ ವಿದ್ಯಾಲಯದ ಹೆಸರು ನಂತರ 'ವಂಗ ಮಹಿಳಾ ವಿದ್ಯಾಲಯ' ಎಂದು ಬದಲಾಗಿ, ಮುಂದೆ ಈ ವಿದ್ಯಾಲಯ 'ಬೆಥೂನ್ ಶಾಲೆ'ಯೊಡನೆ ಸೇರ್ಪಡೆಯಾಯಿತು. ಕದಂಬಿನಿ ಓದಿನಲ್ಲಿ ತುಂಬಾ ಜಾಣೆ. ಆಕೆಯ ಪ್ರತಿಭೆ, ಬುದ್ಧಿವಂತಿಕೆ , ದ್ವಾರಕಾನಾಥ್ ಅವರನ್ನು ಆಕರ್ಷಿಸಿತು. ದ್ವಾರಕಾನಾಥ್ ಅವರು ಶಾಲಾ ಪರೀಕ್ಷಾಧಿಕಾರಿಯಾಗಿದ್ದು, ಮೊದಲಿನಿಂದಲೂ ಕದಂಬಿನಿಯ ಚುರುಕುತನ ಅವರನ್ನು ಬೆರಗುಗೊಳಿಸಿತ್ತು.

ಈ ಸಮಯಕ್ಕಾಗಲೇ ಮಹಿಳಾ ಶಾಲೆ ಆರಂಭವಾಗಿದ್ದು, ಅನೇಕ ಹೆಣ್ಣು ಮಕ್ಕಳು ಇಲ್ಲಿ ಓದುತ್ತಿದ್ದರೂ, ಅವರಿಗೆ ವಿಶ್ವವಿದ್ಯಾಲಯದ ಪರೀಕ್ಷೆಗೆ ಪ್ರವೇಶವಿರಲಿಲ್ಲ. ದ್ವಾರಕಾನಾಥ್ ಅವರಿಗೆ ಈ ವಿಷಯ ತುಂಬಾ ಸಿಟ್ಟು ತರಿಸಿತ್ತು. ಅನೇಕ ಪ್ರಭಾವೀ ವ್ಯಕ್ತಿಗಳ ಸಹಾಯ ಪಡೆದ ಇವರು ಒಂದು ಚಳುವಳಿಯನ್ನೇ ಆರಂಭಿಸಿದರು. ಅಂದಿನ ಕುಲಪತಿಯಾಗಿದ್ದ ಸರ್ ಹಾಬ್‌ಹೌಸ್ ಕೂಡಾ ಮಹಿಳಾ ಶಿಕ್ಷಣದ ಪರವಿದ್ದದ್ದು ಅನುಕೂಲವಾಯಿತು. ಈತ ಮಹಿಳೆಯರಿಗೆ ಪ್ರವೇಶ ಪರೀಕ್ಷೆಗೆ ಕೂರಲು ಒಂದು ಅರ್ಹತಾ ಪರೀಕ್ಷೆಯ ವ್ಯವಸ್ಥೆ ಮಾಡಿದನು. ಕದಂಬಿನಿ ಮತ್ತು ಹಲವು ಹೆಣ್ಣುಮಕ್ಕಳು ಈ ಪರೀಕ್ಷೆಗೆ ಕುಳಿತರು. ಕದಂಬಿನಿ ಹೆಚ್ಚು ಅಂಕಗಳನ್ನು ಪಡೆದು ಈ ಅರ್ಹತಾ ಪರೀಕ್ಷೆಯಲ್ಲಿ ಪಾಸು ಮಾಡಿದಾಗ, ತೃಪ್ತಗೊಂಡು ಅಧಿಕಾರಿಗಳು ಅಕ್ಟೋಬರ್ 27, 1878 ರಂದು ಮಹಿಳೆಯರಿಗೆ ವಿಶ್ವವಿದ್ಯಾಲಯದ ಪ್ರವೇಶ ಪರೀಕ್ಷೆ ತೆಗೆದುಕೊಳ್ಳಲು ಅವಕಾಶ ಮಾಡಿಕೊಟ್ಟರು. ಕದಂಬಿನಿ ಬೆಥೂನ್ ಶಾಲೆಯಿಂದ ಈ ಪ್ರವೇಶ ಪರೀಕ್ಷೆಗೆ ಕುಳಿತು, ತನ್ನ

ಎಂದಿನ ಪ್ರತಿಭೆ, ಬುದ್ಧಿವಂತಿಕೆಯನ್ನು ಮೆರೆದರು. ಬಂಗಾಲದ ರಾಜ್ಯಪಾಲರಿಂದ ಕದಂಬಿನಿ ಇಂಟರ್‌ಮೀಡಿಯೆಟ್ ಓದಲು ವಿದ್ಯಾರ್ಥಿವೇತನವನ್ನು ಕೂಡಾ ಪಡೆದರು. 1880ರಲ್ಲಿ ಇಂಟರ್ಮೀಡಿಯೆಟ್ ಪಾಸು ಮಾಡಿ ಬಿ.ಎ. ಓದಲು ಹೊರಟರು. 1883ರಲ್ಲಿ ಕದಂಬಿನಿ ಮತ್ತು ಚಂದ್ರಮುಖಿ ಬಸು ಮೊಟ್ಟಮೊದಲ ಬಾರಿಗೆ ಬಿ.ಎ. ಪದವಿ ಪಡೆದ ಭಾರತೀಯ ಮಹಿಳೆಯರಾದರು.

ಇದೇ ಸಮಯದಲ್ಲಿ ಕದಂಬಿನಿ ವಿಧುರರಾಗಿದ್ದ ದ್ವಾರಕಾನಾಥ್ ಅವರನ್ನು ವಿವಾಹವಾದರು. ಆದರೆ ಸಾಮಾನ್ಯ ಹೆಂಗಸರಂತೆ ಕದಂಬಿನಿ ಮನೆವಾರ್ತೆಯಲ್ಲಿ ತೃಪ್ತರಾಗಲಿಲ್ಲ. ವೈದ್ಯಶಾಸ್ತ್ರವನ್ನು ಓದಲು ಇಚ್ಛಿಸಿದ ಈಕೆ ಬಹಳಷ್ಟು ವಿರೋಧದ ನಡುವೆಯೂ 1884ರಲ್ಲಿ ಬೆಂಗಾಲ್ ಮೆಡಿಕಲ್ ಕಾಲೇಜನ್ನು ಸೇರಿದರು. ಆಕೆಯ ಪ್ರವೇಶಕ್ಕೆ ಬಹಳಷ್ಟು ವಿರೋಧವಿದ್ದು, ಈಕೆ ಡಿಪ್ಲಮೋ ಪಡೆದರೂ, 1888ರಲ್ಲಿ ಪರೀಕ್ಷಕರ ಆಜ್ಞೆಯಂತೆ ಕದಂಬಿನಿಗೆ ಡಿಗ್ರಿ ಪರೀಕ್ಷೆಯಲ್ಲಿ ಪಾಸಿನ ಅಂಕಗಳನ್ನು ಕೊಡಲು ನಿರಾಕರಿಸಿದರು. ಧೃತಿಗೆಡದ ಕದಂಬಿನಿ ತನ್ನ ಗುರಿಯಿಂದ ವಿಚಲಿತಳಾಗದೆ, ತನ್ನ ಕುಟುಂಬವನ್ನು ಭಾರತದಲ್ಲಿ ಬಿಟ್ಟು, 1892ರಲ್ಲಿ ಇಂಗ್ಲೆಂಡಿಗೆ ಹೋದರು. ಇಲ್ಲಿ ಎಡಿನ್ಬರೋನಿಂದ ಎಲ್.ಆರ್.ಸಿ.ಪಿ., ಗ್ಲಾಸ್ಗೋನಿಂದ ಎಲ್.ಆರ್.ಸಿ.ಎಸ್. ಮತ್ತು ಡಬ್ಲಿನ್‌ನಿಂದ ಎಲ್.ಎಫ್.ಪಿ.ಎಸ್. ಪಡೆದು ಭಾರತಕ್ಕೆ ಹಿಂತಿರುಗಿದರು. ಕದಂಬಿನಿ ಲೇಡಿ ಡಫ್ಫಿನ್ ಆಸ್ಪತ್ರೆಯನ್ನು ಸೇರಿ, ಸ್ವತಂತ್ರವಾಗಿ ವೈದ್ಯ ವೃತ್ತಿಯನ್ನು ಆರಂಭಿಸಿದರು. ಇಲ್ಲಿ ವೈದ್ಯಳ ಕರ್ತವ್ಯವನ್ನು ನಿಭಾಯಿಸುತ್ತಲೇ ಈಕೆ 'ಕ್ಯಾಂಬೆಲ್ ಮೆಡಿಕಲ್ ಶಾಲೆ'ಯಲ್ಲಿ ಸ್ತ್ರೀ ಪ್ರಸೂತಿ ಶಾಸ್ತ್ರದ (gynaecology) ಪ್ರೊಫೆಸರ್ ಆಗಿಯೂ ಕೆಲಸ ಮಾಡಿದರು.

ಕದಂಬಿನಿ, ದ್ವಾರಕಾನಾಥ್ ಟಾಗೋರ್ ಅವರ ಮಗಳು ಜ್ಯೋತಿರ್ಮಯಿಯೊಡನೆ ಕಲಕತ್ತೆ ಮಹಾನಗರಪಾಲಿಕೆಯ ಮೊಟ್ಟಮೊದಲ ಮಹಿಳಾ ಸದಸ್ಯರಾದರು. 1901ರಲ್ಲಿ ಕದಂಬಿನಿ ಕಲಕತ್ತೆಯಲ್ಲಿ ನಡೆದ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಬಹಿರಂಗ ಸಭೆಯಲ್ಲಿ ಮಾತನಾಡಿದರು. ರಾಷ್ಟ್ರೀಯ ಕಾಂಗ್ರೆಸ್ಸಿನ ಸಭೆಯಲ್ಲಿ ಮಾತನಾಡಿದ ಮೊಟ್ಟ ಮೊದಲ ಭಾರತೀಯ ಮಹಿಳೆ ಕದಂಬಿನಿ ಗಂಗೋಪಾಧ್ಯಾಯ.

ಪ್ರಿಯ ಸಂಪಾದಕರೆ,

'ಅಚಲ' ಇಂದು ಕೈಸೇರಿತು. ಧನ್ಯವಾದಗಳು. ದಶಮಾನೋತ್ಸವದ ಈ ಸಂಚಿಕೆ ನಾನು ಕಂಡ ಮೊದಲ ಸ್ತ್ರೀಪರ ಬರವಣಿಗೆಯ ಮೆಚ್ಚಿನ ದಾಖಲೆ. ಇನ್ನೆಲ್ಲ ಇಂಥ ಸಂಚಿಕೆಗಳಿಗೆ 'ಅಚಲ' ಅಪೂರ್ವವಾದ ರೀತಿಯಲ್ಲಿ ಅಪವಾದವೆನಿಸುತ್ತದೆ.

ಜಿ.ಆರ್. ಅವರ ಹೋರಾಟ ಕುರಿತ ಲೇಖನ, ರಂಜಾನ ದರ್ಗಾ ಅವರ 'ಬದಲಾಗುತ್ತಿರುವ ಭಾರತೀಯ ಸಮಾಜದಲ್ಲಿ ಮಹಿಳೆ', ವೈದೇಹಿಯವರ 'ನನ್ನ ಅಮ್ಮನ ಸೀರೆ' (ಇನ್ನೂ ಕೆಲವು) ನನ್ನ ಗಮನ ಸೆಳೆದವು. ವಿಚಾರ ದೃಷ್ಟಿಯಿಂದ ದರ್ಗಾರ ಹೆಣ್ಣಿನ ಶೋಷಣೆ, ಆಕಾಶದಲ್ಲಿ ರೆಕ್ಕೆ ಬೀಸಿ ಹಾರುವ ಹಕ್ಕಿ ಮನಸ್ಸಿನ ಸ್ವಾತಂತ್ರ್ಯ ಭಾವ ಸ್ವೇಚ್ಛೆಯ ಪರಿಧಿ ಮುಟ್ಟಿ, ಆರ್ಥಿಕ ತೃಪ್ತಿಯ ತನ್ಮಯತೆಯನ್ನು ರೂಢಿಸಿಕೊಂಡಿರುವುದು, ನಮ್ಮ ಕಾಲದ ಯುವ ಪೀಳಿಗೆಯ ಮಹಿಳೆಯ ವಿಶಿಷ್ಟ ಗುಣವಾಗಿದೆ. ಲೈಂಗಿಕ ನಡವಳಿಕೆಯ ವಿರೋಧಾಭಾಸ ಪಾರಂಪರಿಕ ಬದುಕಿನ ಸತ್ವವನ್ನು ನಿರ್ದಿಷ್ಟ ಜೀವನ ಕ್ರಮವನ್ನು ರೂಪಿಸುವಲ್ಲಿ ಸಾಫಲ್ಯ ಕಂಡಿಲ್ಲವೆನಿಸುವುದು. ಅಶ್ಲೀಲ ಪ್ರದರ್ಶನ ಹೆಣ್ಣಿನ ಮನಸ್ಸಿಗೆ ನಾಟಿಲ್ಲವಾದುದರಿಂದ (ರೂಪಸಿಯ ವೃತ್ತಿಯ ಸ್ತ್ರೀಯರು) ಅದರ ಸಾರ್ವಜನಿಕ ಪ್ರದರ್ಶನ ತಮ್ಮ ಬಂಡವಾಳವೆನ್ನುವವರು. ಧಾರಾಳವಾಗಿ ವೀಕ್ಷಕರ ನೋಟ ಹಾಗೂ ಮನಸ್ಸನ್ನು ಶೋಷಿಸುವ ವಿಧಾನ ಇನ್ನಾವ ಬಗೆ ಶೋಷಣೆಗಿಂತ ಭಿನ್ನವಾದುದಲ್ಲ. ಒಂದು ಮಟ್ಟದ ವಿಶ್ಲೇಷಣೆಯಲ್ಲಿ ವ್ಯಕ್ತಿಕ್ರಿಯೆ ಶೋಷಣಾಪೂರಕವೆನಿಸುವುದರಲ್ಲಿ ವಿಶೇಷವಲ್ಲವೇನು? ಆದ್ದರಿಂದ ಪುರುಷ -ಸ್ತ್ರೀ ಪರಸ್ಪರ ವೈಯಕ್ತಿಕ ಮಾರ್ಗವನ್ನನುಸರಿಸಿ ತಮ್ಮ ಅಭೀಷ್ಟಗಳನ್ನು ತೃಪ್ತಿಗೊಳಿಸಿ ಶೋಷಣೆಯ ಗರಗಸದಲ್ಲಿ ಛಿದ್ರವಾಗುವುದು ದುರದೃಷ್ಟಕರ. ಸ್ತ್ರೀ-ಪುರುಷ ಶರೀರದ ಅಂದ ಚೆಂದ ಸ್ವಾಭಾವಿಕವಾಗಿಯೇ ಆಕರ್ಷಣೀಯ. ವ್ಯಕ್ತಿ ಇದರ ಬಂಡವಾಳವನ್ನು ತನಗನಿಸಿದ ಹಾಗೆ ಹೂಡಿ ಪಡೆಯುವ ಲಾಭ, ಅನೇಕ ವೇಳೆ ಸಾಮುದಾಯಿಕ ಜೀವನ ವ್ಯವಸ್ಥೆಗೆ ಮಾರಕವಾಗುವುದು. ಈ ಸ್ಥಿತಿ ಈಗ ಸಾಮಾನ್ಯ. ಸ್ತ್ರೀ ಮಾವ ಸ್ತ್ರೀಯ ಅಂಗಾಂಗ ಮುಚ್ಚಿಡುವುದರಲ್ಲಷ್ಟೇ ಎನ್ನುವ ಅಕ್ಕ ತಂಗಿಯರು, ಇಂದಿನ ಬಂಡವಾಳಿಗ ಮನಸ್ಸಿನ ಸ್ತ್ರೀಯರ 'ಎದೆಗಾರಿಕೆಯನ್ನು ಸಾರಾಸಗಟಾಗಿ ಹೀನಾಯದಿಂದ ನೋಡುವುದು ಸಾಮಾನ್ಯ. ಇದರ ಜೊತೆಗೆ ಗಂಡಿನ ಮನಸ್ಸನ್ನು ಕಾಮಾತಿರೇಕದ ಕಾಮನೆಗೆ ಗುರಿಪಡಿಸಿ 'ಮಾನ' ಸಂಹಿತೆಗೆ ತಿದ್ದುಪಡಿ ತರುತ್ತಿರುವ 'ತಾರಾ ರೂಪಸಿ' ಯರು ಸೊಗಸುಗಾರಿಕೆಯ ಕುದುರೆ ಬಾಲ ಹಿಡಿದು ಪ್ರಗತಿಯ ಓಟದಲ್ಲಿ ಭಾಗವಹಿಸುತ್ತಿದ್ದಾರೆ!

ಇಂದಿನ ಪ್ರಶ್ನೆ ಬದುಕಿನಲ್ಲಿ ಸ್ತ್ರೀ-ಪುರುಷ ಸಾಮರಸ್ಯ; ಪರಸ್ಪರ ವ್ಯಕ್ತಿ ಮರ್ಯಾದೆ, ಲೈಂಗಿಕ ಹೊಂದಾಣಿಕೆ, ಶೋಷಣಾರಹಿತ ಸಮುದಾಯ ಬಾಂಧವ್ಯ. ವರ್ಗಪ್ರಜ್ಞೆಯ ಜನ ಈ ಸಮಸ್ಯೆಗಳಿಗೆ ಸ್ಪಂದಿಸಲಾರರು. ತಮ್ಮತನದ ಅತಿ ಅರಿವಿನಿಂದಾಗಿ ಸಾಮುದಾಯಿಕ ಪ್ರಜ್ಞೆ ಹಿಂದೆ ಬೀಳುವುದು ವ್ಯಕ್ತಿ ದ್ವೀಪಗಳ ಹುಟ್ಟು, ಬಾಳಸಾಗರದಲ್ಲಿ ಸಮಾನತೆಯ ಮನಸ್ಸು ಮತ್ತು ಕ್ರಿಯೆ ಅಪರೂಪ ಜನತೆಯಲ್ಲಿ. ಮಹಿಳೆಯರ ಸಂಘರ್ಷ ಸಾಗುತ್ತಿರುವ ಹಾದಿ ಸಂಶಯ ಹಾಗೂ ಆಶ್ಚರ್ಯ ಉಂಟುಮಾಡುವ ದಿಶೆಯಲ್ಲಿ ಕಂಡು ಬಂದಿವೆ. ವೃತ್ತಿ, ವ್ಯಕ್ತಿತ್ವ, ಸಮುದಾಯ ಭಾವನೆಯ ಮೌಲ್ಯ ಎಲ್ಲದರ ಸಮ್ಮಿಳನ ಹೊಸ ಬಗೆಯ .ಜೀವನ ದೃಷ್ಟಿಗೆ ಬೆಂಬಲವಾಗಿದೆ. ಸ್ತ್ರೀ-ಪುರುಷರಲ್ಲಿ ಸಾಮಾನ್ಯ ವಿಚಾರ ಪ್ರಾಮುಖ್ಯವೆನಿಸಿದರೆ, ಸಮುದಾಯ ಮೌಲ್ಯಗಳು ಪ್ರಸ್ತುತವೆನಿಸುತ್ತದೆ. ಸಂಘರ್ಷ ಮನೋಭಾವ ಬೇರೆಲ್ಲ ತಾತ್ವಿಕ ಚಿಂತನೆಯನ್ನು (ವೈಯಕ್ತಿಕ ವೈಭವವನ್ನು ಮೆರೆಸುವುದಾದರೆ) ಸಮಷ್ಟಿಯ ಒರೆಗಲ್ಲಿನಲ್ಲಿ ತಿಕ್ಕಿ ಅದರ ವಾಸ್ತವಿಕ ಪರಿಣಾಮವನ್ನು ನಿರ್ದಿಷ್ಟವಾಗಿ ಪರಿಶೀಲಿಸುತ್ತದೆ. ಆದ್ದರಿಂದ ಮುಂಬರುವ ದಿನಗಳಲ್ಲಿ ವಿದ್ಯಾವಂತ ಜನತೆ (ಹೆಚ್ಚು ಹೆಚ್ಚು ಮಹಿಳೆಯರು) ಬೌದ್ಧಿಕವಾಗಿ ಬಾಳಿನ ಮೌಲ್ಯವನ್ನು ವಿಚಾರ ಮಾಡಿ ಈ ಪ್ರಪಂಚದಲ್ಲಿ ಸುಖ ಪ್ರಾಪ್ತಿಗೆ ತಮ್ಮ ಸಂವೇದನಾಶೀಲ ನಡವಳಿಕೆಯನ್ನು ರೂಪಿಸಿಕೊಳ್ಳಬಹುದು. ಪರದ ಚಿಂತೆ ಸ್ತ್ರೀಯರಿಂದ ಮುಂಪೀಳಿಗೆಯವರಿಗೆ ನಂಬಿಕೆಯ ರೂಪದಲ್ಲಿ ಕೊಡಲ್ಪಟ್ಟಿದೆ. ಈ ವಸ್ತುಸ್ಥಿತಿಯ ಪರಾಮರ್ಶೆ ವೈಜ್ಞಾನಿಕವಾಗಿ ನಡೆದರಷ್ಟೆ, ಸಮುದಾಯ ಬದುಕಿನ ಮಹತ್ವ ಮತ್ತೆ ಕಾಣಬಲ್ಲದು. ಸ್ತ್ರೀ ಅಂತಃಸತ್ವದ ಪ್ರತೀಕ ಎನ್ನುವುದರಲ್ಲಿ ಸಂಶಯವಿಲ್ಲ. ಇದನ್ನರಿತು ಆಕೆ ಕೊಂಚವಾದರೂ ಪರಂಪರಾನುಗತ ಮಾರ್ಗದಿಂದ ವಿಮುಖಳಾದರೆ ಪುನಶ್ಚೇತನಗೊಳ್ಳುವುದು: ನಮ್ಮ ತಾಯಂದಿರು, ಅಕ್ಕತಂಗಿಯರು ಸಮಾಜ ಮತ್ತು ಹೆಣ್ಣು ಮಕ್ಕಳು ಈ ಪ್ರಯತ್ನದಲ್ಲಿ ಸಹಭಾಗಿಗಳಾಗಲಿ ಎಂದು ಆಶಿಸುತ್ತೇನೆ.

• **ಎನ್. ದಯಾನಂದ**

## ಶಾಂತಿ, ಪ್ರೇಮ, ಸಹನೆ - *ಸಹಬಾಳ್ವೆ ಇದು ನಮ್ಮ ಮತವಾಗಲಿ*

❖ ದ್ವೇಷವನ್ನು ವಿರೋಧಿಸಿ, ಮತೀಯ ಅಂಧಾಭಿಮಾನವನ್ನು ದೂರ ಮಾಡಿ, ಮತಭ್ರಾಂತಿಯನ್ನು ತಿರಸ್ಕರಿಸಿ ನಮ್ಮ ರಾಷ್ಟ್ರದ ಸಂದ ಜಾತ್ಯಾತೀತ ಹಂದರವನ್ನು ವಿಚ್ಛಿದ್ರಕಾರಕ ಶಕ್ತಿಗಳು ಹಾಳು ಮಾಡಲು ಎಡೆಗೊಡಬೇಡಿ.

❖ ಭಾರತದ ಒಗ್ಗಟ್ಟು ಹಾಳಾದರೆ, ರಾಷ್ಟ್ರಶಕ್ತಿ ಕುಂದುತ್ತದೆ. ಭಾರತ ಅಶಕ್ತವಾಗಲು ನಾವೆಂದಿಗೂ ಅವಕಾಶ ನೀಡಬಾರದು.

❖ ಶತಶತಮಾನಗಳಿಂದ ಭಾರತದ ಪವಿತ್ರ ನೆಲದಲ್ಲಿ ವಿವಿಧ ಜನಾಂಗ, ಜಾತಿ ಸಂಸ್ಕೃತಿಗಳು ಒಟ್ಟಿಗೆ ಅರಳಿವೆ, ಬಾಳಿ ಬದುಕಿವೆ. ರಾಷ್ಟ್ರದ ಸಮಗ್ರ ಪ್ರಗತಿಗೆ ತಮ್ಮ ಕೊಡುಗೆಯನ್ನು ನೀಡಿ, ದೇಶಕ್ಕೆ ವಿಶ್ವದಲ್ಲಿಯೇ ಸರಿಸಾಟಿಯಿಲ್ಲದ ಅದ್ವಿತೀಯ ಸ್ಥಾನವನ್ನು ಗಳಿಸಿಕೊಟ್ಟಿವೆ.

❖ ನಮ್ಮ ರಾಷ್ಟ್ರದ ಜಾತ್ಯಾತೀತ ತಳಹದಿ ಅಭದ್ರವಾಗುತ್ತಿದೆ.

❖ ಮತೀಯ ದ್ವೇಷಾಸೂಯೆಗಳಿಂದ ನಮ್ಮ ಪ್ರಗತಿ ಕುಂಠಿತವಾಗಿ ಆರ್ಥಿಕ ವಿಕಾಸ ಅಸ್ತವ್ಯಸ್ತವಾಗುವುದಕ್ಕೆ ಅವಕಾಶ ಮಾಡಿಕೊಡುವುದು ಸರಿಯೇ? ವಿಮರ್ಶಿಸಿ ನೋಡಿ.

❖ ನಮ್ಮ ರಾಜ್ಯಾಂಗದಲ್ಲಿ ಅಳವಡಿಸಿರುವ ಪವಿತ್ರವಾದ ಜಾತ್ಯಾತೀತ ಆದೇಶಗಳಿಗೆ ಕಳಂಕ ತರುವುದು ನ್ಯಾಯವೇ? ವಿಚಾರ ಮಾಡಿ.

❖ ರಾಷ್ಟ್ರದ ಶಾಂತಿ ಮತ್ತು ಪ್ರಗತಿಗಾಗಿ ಒಮ್ಮತದಿಂದ ಒಂದುಗೂಡಿ ಕೋಮು ಸೌಹಾರ್ದದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ.

❖ ಮತೀಯ ಮನೋವಿಕಾರಗಳನ್ನು ಕಿತ್ತೊಗೆದು, ಒಗ್ಗಟ್ಟು -ಒಮ್ಮನಸ್ಸಿನಿಂದ ತಲೆ ಎತ್ತಿ ನಿಲ್ಲೋಣ. "ವಿಶ್ವದ ಎಲ್ಲ ರಾಷ್ಟ್ರಗಳ, ಎಲ್ಲ ಜನಾಂಗಗಳ ತಿರಸ್ಕೃತಗೊಂಡವರಿಗೆ ಮತ್ತು ನಿರಾಶ್ರಿತರಿಗೆ ಆಶ್ರಯ ನೀಡಿದ ಪವಿತ್ರ ರಾಷ್ಟ್ರ ನನ್ನದೆಂಬ ಹೆಮ್ಮೆ ಮತ್ತು ಅಭಿಮತ ನನ್ನದು" - ಎಂಬ ಸ್ವಾಮಿ ವಿವೇಕಾನಂದರ ವಾಕ್ಯವನ್ನು ನಾವೆಲ್ಲರೂ ಪುನರುಚ್ಚರಿಸೋಣ.

**ಕರ್ನಾಟಕ ವಾರ್ತೆ**

# ಭಾರತದಲ್ಲಿ ಮಹಿಳಾ ಮೊದಲಿಗರು

1878 ಕದಂಬಿನಿ ಗಂಗೂಲಿ(ಬೋಸ್) ವಿಶ್ವವಿದ್ಯಾಲಯದ ಪ್ರವೇಶ ಪರೀಕ್ಷೆ ತೆಗೆದುಕೊಂಡ ಮೊದಲ ಭಾರತೀಯ ಮಹಿಳೆ. ಆಕ್ಟೋಬರ್ 27 ರಂದು ಕಲಕತ್ತಾ ವಿಶ್ವವಿದ್ಯಾಲಯ ಮಹಿಳೆಯರಿಗೆ ಪ್ರವೇಶ ಪರೀಕ್ಷೆ ತೆಗೆದುಕೊಳ್ಳಲು ಅವಕಾಶ ನೀಡಿತ್ತು.

1879 ಮೋನೋ ಮೋಹಿನಿ ಬಂದೋಪಾಧ್ಯಾಯ ಸರಕಾರಿ ನೌಕರಿ ಪಡೆದ ಮೊಟ್ಟಮೊದಲ ಭಾರತೀಯ ಮಹಿಳೆ.

1883 ಕದಂಬಿನಿ ಗಂಗೂಲಿ ಮತ್ತು ಚಂದ್ರಮುಖಿ ಬಸು, ಮೊಟ್ಟಮೊದಲಿಗೆ ಬಿ.ಎ. ಪದವಿ ಪಡೆದ ಮಹಿಳೆಯರು. ಇವರು ಕಲಕತ್ತಾ ವಿಶ್ವವಿದ್ಯಾಲಯದಿಂದ ಪದವಿ ಪಡೆದರು.

1884 ಚಂದ್ರಮುಖಿ ಬಸು ಎಂ.ಎ. ಪದವಿ ಪಡೆದ ಮೊಟ್ಟಮೊದಲ ಮಹಿಳೆ. ಈಕೆ ನಂತರ ಕಲಕತ್ತೆಯ ಬೆಥೂನ್ ಶಾಲೆಯಲ್ಲಿ ಪ್ರಾಧ್ಯಾಪಕರಾಗಿ ಸೇರಿದರು.

1888 ಕದಂಬಿನಿ ಗಂಗೂಲಿ ವೈದ್ಯಶಾಸ್ತ್ರವನ್ನು ಓದಿ, 'ಬೆಂಗಾಲ್ ವೈದ್ಯಕೀಯ ಕಾಲೇಜಿ'ನ ಡಿಪ್ಲಮೊ ಪಡೆದು, ಭಾರತದ ಮೊಟ್ಟಮೊದಲ ಮಹಿಳಾ ವೈದ್ಯರಾದರು. ಈಕೆ ನಂತರ ಕಲಕತ್ತೆಯ ಈಡನ್ ಆಸ್ಪತ್ರೆಯನ್ನು ಸೇರಿ ಸೇವೆ ಸಲ್ಲಿಸಿದರು.

1889 ಬಿಂದುಮುಖಿ ಬೋಸ್ ಮತ್ತು ಮೇರಿ ವರ್ಜಿನಿಯ ಮಿಟ್ಟರ್ ವೈದ್ಯಕೀಯದ ಪದವಿ ಪಡೆದ ಮೊಟ್ಟ ಮೊದಲ ಮಹಿಳೆಯರು.

1900 ಮಹಾನ್ ವೈದ್ಯ ದಾರ್ಶನಿಕರಾದ ಡಾ. ಇಡಾ ಸೋಫೈಯಾ ಸ್ಕೂಡರ್ ಕೊಡಯ್‌ಕೆನಾಲಿನಲ್ಲಿ ವಿಶ್ವ ಖ್ಯಾತಿಯ ವಿಲ್ಲೂರ್ ಆಸ್ಪತ್ರೆಯನ್ನು ಸ್ಥಾಪಿಸಿದರು.

1901 ಭಾರತದ ಮೊಟ್ಟಮೊದಲ ಮಹಿಳಾ ಪತ್ರಿಕೆ 'ದಿ ಇಂಡಿಯನ್ ಲೇಡೀಸ್ ಮ್ಯಾಗಜೀನ್' ಆರಂಭಿಸಿದಾಕೆ ಮದ್ರಾಸಿನ ಕಮಲಾ ಸ್ವಾಮಿನಾಥನ್.

1917 ಅನಿ ಬೆಸೆಂಟ್ 'ಭಾರತೀಯ ರಾಷ್ಟ್ರೀಯ ಕಾಂಗ್ರೆಸ್'ನ ಅಧ್ಯಕ್ಷರಾದ ಮೊಟ್ಟಮೊದಲ ಮಹಿಳೆ.

1918 ಕ್ರಾಂತಿಕಾರರಿಗೆ ಆಶ್ರಯಕೊಟ್ಟ ಕಾರಣ ಜೈಲು ಸೇರಿದ ನಾನಿಬಾಲಾ ದೇಬಿ ಭಾರತದ ಮೊಟ್ಟಮೊದಲ ಮಹಿಳಾ ರಾಜಕೀಯ ಖೈದಿ.

1923 ಅಲಹಾಬಾದಿನ ಹೈ ಕೋರ್ಟಿಗೆ ಪ್ರವೇಶ ಪಡೆದ ಕಾರ್ನೀಲಿಯಾ ಸೋರಬ್ಜಿ ಮೊಟ್ಟಮೊದಲ ಮಹಿಳಾ ನ್ಯಾಯವಾದಿ.

1926 ಡಾ. ಎಸ್. ಮುತ್ತುಲಕ್ಷ್ಮೀ ರೆಡ್ಡಿ, ಮದ್ರಾಸ್ ಲೆಜಿಸ್ಲೇಟಿವ್ ಕೌನ್ಸಿಲ್‌ನ ಸದಸ್ಯರಾಗಿ, ಮೊಟ್ಟಮೊದಲ ಮಹಿಳಾ ಶಾಸಕರಾದರು.

1929 ಭಾರತದಲ್ಲಿ ಮೊಟ್ಟಮೊದಲಿಗೆ ವಿಮಾನ ಹಾರಿಸಿದ ಮಹಿಳೆ, ಜೋನ್ ಪೇಜ್ ಎಂಬ ಆಂಗ್ಲ ಮಹಿಳೆ.

1937 ಡಾ. ಎಸ್. ಮುತ್ತುಲಕ್ಷ್ಮೀ ರೆಡ್ಡಿ ಮೊಟ್ಟಮೊದಲ ಮಹಿಳಾ 'ಆಲ್ಡರ್ಮನ್' ಮದ್ರಾಸ್ ಕಾರ್ಪೊರೇಷನ್ನಿಗೆ ಸೇರಿದಾಕೆ.

1943 ಎ. ಲಲಿತಾ ಮತ್ತು ಲೀಲಾ ಜಾರ್ಜ್ ಭಾರತದಲ್ಲಿ ಇಂಜಿನಿಯರಿಂಗ್ ಪದವಿ ಪಡೆದ ಮೊಟ್ಟಮೊದಲ ಮಹಿಳೆಯರು. ಇವರು ಮದ್ರಾಸಿನ ಗಿಂಡಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಓದಿ ಬಿ.ಇ.( ಆನರ್ಸ್) ಪದವಿ ಪಡೆದರು. ಎ. ಲಲಿತಾ ಎಲೆಕ್ಟ್ರಿಕಲ್ ವಿಭಾಗದಲ್ಲಿಯೂ, ಲೀಲಾ ಜಾರ್ಜ್ ಸಿವಿಲ್ ವಿಭಾಗದಲ್ಲಿಯೂ ಪದವಿ ಪಡೆದರು. ಮುಂದೆ 1951ರಲ್ಲಿ ಇಳಾ ಮಜುಮ್ದಾರ್ ಸಿಬ್ಪುರದ ಬೆಂಗಾಲ್ ಇಂಜಿನಿಯರಿಂಗ್ ಕಾಲೇಜಿನಲ್ಲಿ ಓದಿ, ಮೆಕಾನಿಕಲ್ ಇಂಜಿನಿಯರಿಂಗ್ ಪದವಿ ಪಡೆದರು.

1947 ಉತ್ತರ ಪ್ರದೇಶದ ರಾಜ್ಯಪಾಲರಾಗಿ ನೇಮಕಗೊಂಡ ಸರೋಜಿನಿ ನಾಯ್ಡು ದೇಶದ ಮೊಟ್ಟಮೊದಲ ಮಹಿಳಾ ರಾಜ್ಯಪಾಲರು.

1951 ಪ್ರೇಮ್ ಮಾಥೂರ್, ವೃತ್ತಿಪರ ವಿಮಾನ ಚಾಲನೆಯ ಪರವಾನಗಿ ಪಡೆದ ಮೊಟ್ಟಮೊದಲ ಮಹಿಳೆ.

1951 ಅನ್ನಾ ಆರ್. ಮಲ್ಹೋತ್ರ ದೇಶದ ಮೊಟ್ಟಮೊದಲ ಐ.ಎ.ಎಸ್. ಅಧಿಕಾರಿ. ಈಕೆ ತಮಿಳು ನಾಡಿನ ಹೊಸೂರು ಜಿಲ್ಲೆಯ ಉಪ-ಕಲೆಕ್ಟರ್ ಆಗಿ ಮೊದಲಿಗೆ ನೇಮಕಗೊಂಡರು.

1957 ಮದ್ರಾಸ್ ಕಾರ್ಪೊರೇಷನ್ನಿನ ಮೇಯರ್ ಆಗಿ ನೇಮಕಗೊಂಡ, ಸಾರಾ ಚೆರಿಯನ್, ದೇಶದ ಮೊಟ್ಟ ಮೊದಲ ಮಹಿಳಾ ಮೇಯರ್.

1959 'ಇಂಗ್ಲೀಷ್ ಚಾನೆಲ್'ನ್ನು ಈಜಿದ ಮೊಟ್ಟಮೊದಲ ಏಷಿಯಾದ ಮಹಿಳೆ, ಭಾರತದ ಆರತಿ ಸಾಹಾ.

1959 ಗೀತಾ ಚಂದಾ ಭಾರತದ ಮೊಟ್ಟಮೊದಲ ಮಹಿಳಾ ಪ್ಯಾರಟ್ರೂಪರ್. ಈಕೆ ಭಾರತದ ವಾಯುಸೇನೆಯಲ್ಲಿ ಫ್ಲೈಟ್ ಲೆಫ್ಟಿನೆಂಟ್ ಪದವಿ ಪಡೆದಾಕೆ.

1964 ಜಾಯ್ಸ್ ದುನೆಸೇಟ್ 'ಆಲ್ ವುಮನ್ ಇಂಡಿಯನ್ ಎಕ್ಸ್‌ಪೆಡಿಶನ್'ನ ಮುಂದಾಳಾಗಿ 22490 ಅಡಿ ಎತ್ತರದ ಮೃಗ್ತುನಿ ಶಿಖರವನ್ನು ಏರಿದರು. ಕೇವಲ ಮಹಿಳೆಯರೇ ಏರಿದ ಮೊಟ್ಟ ಮೊದಲ ಶಿಖರವಿದು.

1970 'ಡಿಪ್ಲೊಮಾಟ್' ವೃತ್ತಿಯನ್ನು ಪಡೆದ ಮೊಟ್ಟಮೊದಲ ಮಹಿಳೆ ಕೊನಿರಾ ಬೆಳ್ಳಿಯಪ್ಪ ಮುತ್ತಮ್ಮ. ಈಕೆ ಆಗಸ್ಟ್ 2 ರಂದು ಹಂಗೆರಿಗೆ ರಾಯಭಾರಿಯಾಗಿ ಆರಿಸಲ್ಪಟ್ಟರು.

1972 ಕಿರಣ್ ಬೇಡಿ ಮೊಟ್ಟಮೊದಲ ಮಹಿಳಾ ಐ.ಪಿ.ಎಸ್. ಅಧಿಕಾರಿ.

1972 ಇಂದಿರಾ ಗಾಂಧಿ, ದೇಶದ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ 'ಭಾರತ ರತ್ನ' ಪಡೆದ ಮೊಟ್ಟಮೊದಲ ಮಹಿಳೆ.

1975 ದರ್ಬ್ ಬ್ಯಾನರ್ಜಿ, ವಿಶ್ವದಲ್ಲಿಯೆ ವಾಣಿಜ್ಯ ಹಾರಾಟವನ್ನು ವೃತ್ತಿಯಾಗಿ ಕೈಗೊಂಡ ಮೊಟ್ಟಮೊದಲ ಮಹಿಳಾ ವಿಮಾನ ಚಾಲಕಿ. ಈಕೆ 'ಇಂಡಿಯನ್ ಏರ್ಲೈನ್ಸ್'ನ ಫಾಕರ್ ವಿಮಾನವನ್ನು ಕಲಕತ್ತಾ -ಸಿಲ್ಚರ್-ಇಂಫಾಲ್-ಸಿಲ್ಚರ್-ಕಲಕತ್ತೆಗೆ ಹಾರಿಸಿದರು. ವಾಣಿಜ್ಯ ಹಾರಾಟದಲ್ಲಿ ತೊಡಗದಿದ್ದರೂ ದೇಶದ ಮೊಟ್ಟಮೊದಲ ಮಹಿಳಾ ವಿಮಾನ ಚಾಲಕಿ ಸುಷ್ಮಾ ಮುಖೋಪಾಧ್ಯಾಯ. ಈಕೆ ದೇಶದ ಸ್ವಾತಂತ್ರ್ಯಕ್ಕಾಗಿ

ಹೋರಾಡಿದಾಕೆ.

1976 ಭಾರತದ ಭೂಸೇನೆಯಲ್ಲಿ 'ಜನರಲ್' ಆದ ಮೊಟ್ಟ ಮೊದಲ ಮಹಿಳೆ ಮೇಜರ್ ಜನರಲ್ ಗರ್ಟ್ರೂಡ್ ಆಲಿ ರಾಮ್. ಈಕೆ ಭೂಸೇನೆಯ ಕೇಂದ್ರಸ್ಥಾನದ 'ಮಿಲಿಟರಿ ನರ್ಸಿಂಗ್ ಸರ್ವೀಸಸ್'ನ ಮೊದಲ ಮಹಿಳಾ ನಿರ್ದೇಶಕರಾಗಿ ಕಾರ್ಯ ವಹಿಸಿಕೊಂಡರು.

1977 ತಮ್ಮ ಪುಸ್ತಕ 'ಪ್ರಥಮ ಪ್ರತಿಶ್ರುತಿ'ಗೆ 1976ರ ಸಾಲಿನ ಜ್ಞಾನಪೀಠ ಪ್ರಶಸ್ತಿ ಪಡೆದ ಆಶಾಪೂರ್ಣ ದೇವಿ, ಜ್ಞಾನಪೀಠ ಪ್ರಶಸ್ತಿ ಪಡೆದ ಮೊಟ್ಟಮೊದಲ ಮಹಿಳೆ.

1979 ಮದರ್ ತೆರೆಸಾ ನೋಬಲ್ ಪಾರಿತೋಷಿಕ ಪಡೆದ ಮೊಟ್ಟಮೊದಲ ಭಾರತದ ಮಹಿಳೆ.

1984 ಜಮಶೆಡ್‌ಪುರದ ಇಪ್ಪತ್ತೆಂಟು ವರ್ಷದ ಬಚೇಂದ್ರಿ ಪಾಲ್ ಎವರೆಸ್ಟ್ ಶಿಖರ ಏರಿದ ಮೊಟ್ಟಮೊದಲ ಭಾರತೀಯ ಮಹಿಳೆ.

1986 ಸಂಪೂರ್ಣ ಮಹಿಳಾ ಸಿಬ್ಬಂದಿಗಳನ್ನು ಹೊಂದಿದ ಇಂಡಿಯನ್ ಏರ್ಲೈನ್ಸಿನ ವಿಮಾನವನ್ನು ಚಾಲಕಿಯಾಗಿ ಕ್ಯಾಪ್ಟನ್ ಸೌದಾಮಿನಿ ದೇಶ್ಮುಖ್ ಮತ್ತು ಸಹಚಾಲಕಿಯಾಗಿ ನಿವೇದಿತಾ ಬಾಸಿನ್, ಸಿಲ್ಚರ್ ನಿಂದ ಕಲಕತ್ತೆಗೆ ಹಾರಿಸಿದರು. ಮೊಟ್ಟಮೊದಲ ಸಂಪೂರ್ಣ ಮಹಿಳಾ ಸಿಬ್ಬಂದಿಗಳನ್ನು ಹೊಂದಿದ ವಾಣಿಜ್ಯ ವಿಮಾನ ಹಾರಾಟ ಇದಾಗಿತ್ತು.

1986 ಭಾರತದ ಮೊಟ್ಟಮೊದಲ, ವೈಜ್ಞಾನಿಕ ರೀತಿಯಲ್ಲಿ ದಾಖಲಿಸಿದ ಭ್ರೂಣಾಳ ಶಿಶುವಿನ ಜನ್ಮಕ್ಕೆ ಕಾರಣವಾದ ವೈದ್ಯೆ ಡಾ. ಇಂದಿರಾ ಹಿಂದುಜಾ.

1989 ಸುಪ್ರೀಮ್ ಕೋರ್ಟಿನಲ್ಲಿ ನ್ಯಾಯಾಧೀಶೆಯಾದ ಮೊಟ್ಟಮೊದಲ ಮಹಿಳೆ ಮೀರಾ ಸಾಹಿಬ್ ಫಾತಿಮಾ ಬೀವಿ.

1989 ಕೇರಳದ 'ಚರ್ಚ್ ಆಫ್ ಸೌತ್ ಇಂಡಿಯಾ'ಕ್ಕೆ ಪಾದ್ರಿಯಾಗಿ ಸೇರಿದ ಇಪ್ಪತ್ತೆಂಟು ವರ್ಷದ ಮರಕತವಳ್ಳಿ ಡೇವಿಡ್, ದೇಶದ ಮೊಟ್ಟಮೊದಲ ಮಹಿಳಾ ಪಾದ್ರಿ.

1991 ದಿಲ್ಲಿ ಹೈಕೋರ್ಟಿನ ನ್ಯಾಯಾಧೀಶೆ ಜಸ್ಟೀಸ್ ಲೀಲ ಸೇಠ್, ಹಿಮಾಚಲ ಪ್ರದೇಶದ ಹೈ ಕೋರ್ಟಿನಲ್ಲಿ ಮುಖ್ಯ ನ್ಯಾಯಾಧೀಶರಾದರು. ದೇಶದ ಮೊಟ್ಟಮೊದಲ ಮಹಿಳಾ ಮುಖ್ಯ ನ್ಯಾಯಾಧೀಶೆ ಈಕೆ.

1993 ಎವರೆಸ್ಟ್ ಶಿಖರವನ್ನು ಎರಡು ಬಾರಿ ಏರಿದ ವಿಶ್ವದ ಮೊಟ್ಟಮೊದಲ ಮಹಿಳೆ ಸಂತೋಷಿ ಯಾದವ್. ಈಕೆಯೊಡನೆ ಏರಿದ ಹತ್ತೊಂಬತ್ತು ವರ್ಷದ ಡಿಕಿ ಡೋಲ್ಮಾ, ಎವರೆಸ್ಟ್ ಏರಿದ ವಿಶ್ವದಲ್ಲಿಯೇ ಅತ್ಯಂತ ಚಿಕ್ಕ ವಯಸ್ಸಿನ ಹುಡುಗಿ.

1993 ಕನ್ಯಾಕುಮಾರಿಯ ಎಮ್. ವಸಂತಕುಮಾರಿ ದೇಶದ ಮೊಟ್ಟಮೊದಲ ಮಹಿಳಾ ಬಸ್ ಚಾಲಕಿ.

• **ಸಂಗ್ರಹ : ನೇಮಿ**

# ನ್ಯಾಯಕ್ಕೆ ಹನ್ನೆರಡು ವರ್ಷ ಕಾಯಬೇಕೇ?

ಭಾರತದ ಸಂವಿಧಾನದಲ್ಲಿ ಹೆಣ್ಣು-ಗಂಡುಗಳಿಬ್ಬರಿಗೂ ಸಮಾನತೆಯಿದೆ. ಆದರೆ ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು ಹೊರೆ, ಗಂಡು ವರ ಎಂಬ ಭಾವನೆ, ನಂಬಿಕೆ ಆಳವಾಗಿ ಬೇರೂರಿದೆ. ಇಂತಹ ವಾಸ್ತವತೆಯನ್ನೇ ನಮ್ಮ ನ್ಯಾಯಾಲಯಗಳು ಬಿಂಬಿಸಿದರೆ? ಇಲ್ಲಿದೆ ಅಂತಹದೊಂದು ಪ್ರಕರಣ.

ದೆಹಲಿಯ ಮಧುಬಾಲಾ ಮಿಟ್ಟಲ್ ಪ್ರೀಮೆಡಿಕಲ್ ಕೋರ್ಸಿನಲ್ಲಿ ಕಲಿಯುತ್ತಿದ್ದ ಕುಶಲಮತಿ. ಕಲಿಕೆಯ ಜೊತೆಗೆ, ಬಿಡುವಿನ ವೇಳೆಯಲ್ಲಿ ತನ್ನ ತಂದೆಯ ಅಂಗಡಿಯ ಲೆಕ್ಕ ಪತ್ರಗಳನ್ನು ಗಮನಿಸಿ, ತಂದೆಗೆ ನೆರವಾಗುತ್ತಿದ್ದಳು. ಹನ್ನೆರಡು ವರ್ಷಗಳ ಹಿಂದೆ ರಸ್ತೆ ಅಪಘಾತವೊಂದರಲ್ಲಿ ಅಸು ನೀಗಿದಳು. ಮಗಳನ್ನು ಕಳೆದುಕೊಂಡ ತಂದೆ ತಾಯಿಗಳು ಪರಿಹಾರಧನವಾಗಿ ಒಂದು ಲಕ್ಷ ರೂಪಾಯಿ ಹಣ ಮತ್ತು ಮಗಳ ಚಿಕಿತ್ಸೆಗಾಗಿ ಆಸ್ಪತ್ರೆಗೆ ತೆತ್ತ ಐದು ಸಾವಿರ ರೂಪಾಯಿಗಳಿಗೆ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದರು. ದೆಹಲಿಯ ಮೋಟಾರ್ ಅಪಘಾತ ಪರಿಹಾರ ಟ್ರಿಬ್ಯೂನಲ್‌ನ ನ್ಯಾಯಾಧಿಕಾರಿ ಆರ್.ಕೆ. ಸಿಂಘಾಲ್ ಅವರು 1983ರಲ್ಲಿ ಕೊಟ್ಟ ತೀರ್ಮಾನ "ಪ್ರೀಮೆಡಿಕಲ್ ಕೋರ್ಸಿನಲ್ಲಿ ಶಿಕ್ಷಣ ಪಡೆಯುತ್ತಿದ್ದ ಮಧುಬಾಲಾ ಮಿಟ್ಟಲ್ ಮೋಟಾರ ಅಪಘಾತದಲ್ಲಿ ಸತ್ತದ್ದರಿಂದ ಅವಳ ತಂದೆ ತಾಯಿಯ ತಲೆಯ ಮೇಲಿನ ಹೊರೆಯೊಂದು ಕಡಿಮೆಯಾಯಿತು" ಎಂಬ ಅರ್ಥ ಕೊಡುವಂತಿತ್ತು.

ಇಲ್ಲಿ ತೀರ್ಮಾನ ಕೊಟ್ಟ ನ್ಯಾಯಾಧಿಕಾರಿ, ನೌಕರಿಯಲ್ಲಿಲ್ಲದ ಗಂಡು ಮಗ ಹೇಗೆ ತಂದೆ ತಾಯಿಗಳಿಗೆ ಆಸ್ತಿ, ಹೆಣ್ಣು ಮಗಳು ಏಕೆ ಅವರಿಗೆ ಹೊರೆ ಎಂಬುದನ್ನು ತನ್ನ ತೀರ್ಮಾನದಲ್ಲಿ ವಿವರಿಸಲಿಲ್ಲ. ಟ್ರಿಬ್ಯೂನಲ್ ಅಧಿಕಾರಿ, "ಹೆಣ್ಣು ಮಕ್ಕಳು ತಂದೆ ತಾಯಿಗೆ ಹೊರೆಯಾದ್ದರಿಂದ ಅವಳ ಸಾವು ಒಂದು ಬಗೆಯಲ್ಲಿ ತಂದೆ ತಾಯಿಯರನ್ನು ಕಷ್ಟದಿಂದ ಬಿಡುಗಡೆ ಮಾಡಿತು. ಅವರಿಗೆ ಯಾವ ಪರಿಹಾರವೂ ಬೇಡ " ಎಂಬಂತೆ ತೀರ್ಮಾನವಿತ್ತರು. "ಅವಳ ಸಾವಿನಿಂದ ತಂದೆ ತಾಯಿಗಳಿಗೆ ಆರ್ಥಿಕವಾಗಿ ನಷ್ಟವಾಯಿತು. ಅಷ್ಟೇ ಅಲ್ಲ, ಮಧುಬಾಲಳು ಉದ್ಯೋಗದಲ್ಲಿರಲಿಲ್ಲ. ಪ್ರೀಮೆಡಿಕಲ್‌ನಲ್ಲಿ ಶಿಕ್ಷಣ ಪಡೆಯುತ್ತಿದ್ದಳು. ಅವಳಿಗೆ ಸಂಪಾದನೆ ಇರಲಿಲ್ಲ. ಅವಳು ಅರ್ಜಿದಾರರಿಗೆ ಹೊರೆಯಾಗಿಯೆ ಇರಬೇಕು. ಈ ಹೊರೆ ತಪ್ಪಿದ್ದರಿಂದ ತಂದೆ ತಾಯಿಯರಿಗೆ ಆರ್ಥಿಕವಾಗಿ ನಷ್ಟವಾಯಿತೆಂದು ಪರಿಗಣಿಸಲಾಗದು. ಆದ್ದರಿಂದ ನನ್ನ ಅಭಿಪ್ರಾಯದಂತೆ ಅರ್ಜಿದಾರರಿಗೆ ಯಾವುದೇ ಪರಿಹಾರದ ಅಗತ್ಯವಿಲ್ಲ" ಎಂದು ತೀರ್ಪಿನಲ್ಲಿ ಹೇಳಲಾಗಿತ್ತು.

ತಂದೆತಾಯಿಯರಿಗೆ ದೆಹಲಿಯ ಹೈಕೋರ್ಟ್‌ನಲ್ಲಿಯೂ ನ್ಯಾಯ ದೊರಕಲಿಲ್ಲ. ಹೈಕೋರ್ಟು ನ್ಯಾಯಾಧೀಶರು ತಮ್ಮ ತೀರ್ಮಾನದಲ್ಲಿ "ತಂದೆ 5000 ರೂಪಾಯಿ ಚಿಕಿತ್ಸೆಗಾಗಿ ಖರ್ಚು ಮಾಡಿದರು " ಎಂಬ ಪ್ರತಿಪಾದನೆಯನ್ನು ಟ್ರಿಬ್ಯೂನಲ್ ಮನ್ನಿಸದೇ ಇರುವುದಕ್ಕಾಗಿ, ಟ್ರಿಬ್ಯೂನಲ್‌ನನ್ನು ಆಕ್ಷೇಪಿಸಿತೇ ವಿನಾ, ನಿರುದ್ಯೋಗಿ ಹೆಣ್ಣು ಮಗಳು ತಂದೆ ತಾಯಿಗೆ ಹೊರೆ ಎಂಬ ತೀರ್ಮಾನದ ಕುರಿತು ಮೌನ ಧರಿಸಿತ್ತು. ಅಲ್ಲದೆ ಹೈಕೋರ್ಟು 1987ರಲ್ಲಿನ ಯಾವುದೋ ಒಂದು ತೀರ್ಪಿನ ಆಧಾರದ ಮೇಲೆ, ಪರಿಹಾರ ಬೇಡಿಕೆಯನ್ನು ಶೇ. 60 ರಷ್ಟು ಕಡಿಮೆ ಮಾಡಿತು. 1987ರ ತೀರ್ಪು ಯಾವುದೋ ಒಂದು ಅಪಘಾತದಲ್ಲಿ ಎರಡು ಅಪ್ರಬುದ್ಧ ಹೆಣ್ಣು ಮಕ್ಕಳು ಸತ್ತದ್ದಕ್ಕೆ 35 ಸಾವಿರ ರೂಪಾಯಿ ಪರಿಹಾರ ತೀರ್ಮಾನಿಸಿತ್ತು. ಹೈಕೋರ್ಟು ಆ ತೀರ್ಮಾನದ ಮೇಲ್ಪಂಕ್ತಿ ಅನುಸರಿಸಿತು. ಸತ್ತವರು ಮಗಳು ಮಗನಲ್ಲ ಎಂಬ ವಾದದ ಮೇಲೆ ತಂದೆ ತಾಯಿಗಳಿಗೆ ಪರಿಹಾರ ನಿರಾಕರಿಸಲಾಗದು ಎಂದೇ ಹೈಕೋರ್ಟು ತೀರ್ಮಾನಿಸಿದ್ದರೂ, ಪರಿಹಾರ ತೀರ್ಮಾನಿಸಲು ಅದು ಸೂಚಿಸಿದ ಮಾರ್ಗದರ್ಶಿ ನಿಯಮಗಳು ಹೆಣ್ಣು ಮಕ್ಕಳ ಸಾವಿಗೆ ಕಡಿಮೆ ಪರಿಹಾರ ಕೊಡಬಹುದು ಎಂಬ ಅರ್ಥ ಬರುವಂತಿತ್ತು.

ಆದರೆ ಸರ್ವೋಚ್ಚ ನ್ಯಾಯಾಲಯ, ಕೆಳಗಿನ ನ್ಯಾಯಾಲಯಗಳ ಮಾನಸಿಕ ಜಡ್ಡುತನವನ್ನು ತಿರಸ್ಕರಿಸಿದೆ. ಜಸ್ಟೀಸ್ ಜೆ.ಎಸ್. ಶರ್ಮ, ಜಸ್ಟೀಸ್ ಎನ್.ಪಿ. ಸಿಂಗ್ ಮತ್ತು ಜಸ್ಟೀಸ್ ಕೆ. ವೆಂಕಟಸ್ವಾಮಿ ಅವರನ್ನೊಳಗೊಂಡ ಪೀಠ,

"ಮೋಟಾರ್ ವೆಹಿಕಲ್ಸ್ ಅಪಘಾತ ಪರಿಹಾರ ಟ್ರಿಬ್ಯೂನಲ್ ತೆಗೆದುಕೊಂಡ ನಿಲುವು ಆಘಾತಕರವಾಗಿದೆ" ಎಂದು ಗುರುತಿಸಿದೆ. ತಂದೆ ತಾಯಿಗಳು ಕೇಳಿರುವ ಒಂದು ಲಕ್ಷ ರೂಪಾಯಿ ಪರಿಹಾರ ಮತ್ತು 5000 ರೂಪಾಯಿ ಚಿಕಿತ್ಸೆ ವೆಚ್ಚ ಬಹು ಸಣ್ಣದಾಗಿದ್ದು ಅದರ ನ್ಯಾಯ ಪರಿಗಣಿಸದೇ ನೇರಾಗಿ ಅವರು ಕೇಳಿದ ಪರಿಹಾರ ಕೊಡಬೇಕೆಂದು ತೀರ್ಮಾನಿಸಿತಲ್ಲದೆ 1983ರಿಂದ ಮೊಬಲಗಿನ ಮೇಲೆ ಶೇ. 12 ರಂತೆ ಬಡ್ಡಿ ಸಹ ತೆರಬೇಕೆಂದು ತೀರ್ಮಾನಿಸಿದೆ.

"ಮೋಟಾರ್ ಅಪಘಾತ ಪರಿಹಾರ ಟ್ರಿಬ್ಯೂನಲ್‌ನ ತೀರ್ಮಾನ ಮಾನವೀಯ ಕಳಕಳಿಗೆ ಅವರ ನಿರ್ಲಕ್ಷ್ಯವನ್ನು ಬಹಿರಂಗ ಪಡಿಸುತ್ತದೆ ಮತ್ತು ನ್ಯಾಯಕ್ಕೆ ದೂರವಾಗಿದೆ", ಎಂದು ತೀರ್ಮಾನ ಹೇಳಿದೆಯಲ್ಲದೆ ಸತ್ವಯುತವಾಗಿ ಮಧ್ಯೆ ಪ್ರವೇಶ ಮಾಡಲು ಹೈಕೋರ್ಟು ವಿಫಲವಾದುದಕ್ಕಾಗಿ ಸುಪ್ರೀಂ ಕೋರ್ಟು ತನ್ನ ವ್ಯಥೆ ವ್ಯಕ್ತಪಡಿಸಿದೆ. "ಹೆಣ್ಣು ಮಕ್ಕಳು ತಂದೆ ತಾಯಿಯರಿಗೆ ಹೊರೆ ಎಂದು ಪರಿಗಣಿಸಲಾಗದು" ಎಂದಿದೆ.

ಕೆಳಗಣ ನ್ಯಾಯಾಲಯದ ಟ್ರಿಬ್ಯೂನಲ್ ತೀರ್ಮಾನ ಲಿಂಗಾಧಾರಿತ ತಾರತಮ್ಯ ಭಾವನೆಯನ್ನು ಸೂಚಿಸುವುದಲ್ಲದೆ, ಮಹಿಳೆಯರ ಶಕ್ತಿ, ಸಾಮರ್ಥ್ಯಗಳನ್ನು ಕುರಿತಂತೆ ಪೂರ್ವಗ್ರಹ ಪೀಡಿತ ಅಭಿಪ್ರಾಯಗಳೊಂದಿಗೆ ತೀರ್ಪು ಕೊಡುವ ನ್ಯಾಯಾಧೀಶರ ಪಕ್ಷಪಾತ ಧೋರಣೆಯನ್ನು ಬಿಂಬಿಸುತ್ತದೆ.

ಜೀವನಾಂಶಕ್ಕೆ ಸಂಬಂಧಿಸಿದ ಕಾಯಿದೆಯಂತೆ ವಿಚ್ಛೇದನ ಹೊಂದಿದ ಮಹಿಳೆ, ತನ್ನ ವಿಚ್ಛೇದಿತ ಗಂಡ ನಿರುದ್ಯೋಗಿಯಾಗಿದ್ದರೆ ಅವನಿಗೂ, ಬೇರೆ ಗತಿ ಇಲ್ಲದಿರುವ ತನ್ನ ತಂದೆ ತಾಯಿಯರಿಗೂ ಜೀವನಾಂಶ ಕೊಡಲು ಬದ್ಧಳು - ಎಂಬ ಕಾನೂನಿನ ಹಿನ್ನೆಲೆಯಲ್ಲಿ ಸುಪ್ರೀಂ ಕೋರ್ಟಿನ ತೀರ್ಮಾನ ಒಂದು ಗಮನೀಯ ಮಾರ್ಗದರ್ಶಕವಾಗಿದೆ.

• ಕೃಪೆ : 'ಕೆಂಬಾವುಟ'

# "ಯುಗದ ಆಶಯಗಳ ಜೊತೆ ಅಚಲವಾಗಿ ಸಾಗಿರುವ ಚಲನಶೀಲತೆ"

ಅಂತರರಾಷ್ಟ್ರೀಯ ಮಹಿಳಾ ವರ್ಷದಲ್ಲಿ ಹುಟ್ಟಿಕೊಂಡ ಮಹಿಳಾ ಚಳುವಳಿಯ ಅನೇಕ ಕಿರು ಅಲೆಗಳಲ್ಲಿ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವೂ ಒಂದು. ಸ್ತ್ರೀಯರ ಮೇಲಿನ ದಬ್ಬಾಳಿಕೆ, ಅತ್ಯಾಚಾರ, ವರದಕ್ಷಿಣೆ, ಬಹುಪತ್ನಿತ್ವ ಮುಂತಾದ ಸಮಸ್ಯೆಗಳಲ್ಲದೆ ವಿವಾಹ ವಿಚ್ಛೇದನ, ವಧೂದಹನ, ಬೀಡಿ ಕಾರ್ಮಿಕರ ಸಮಸ್ಯೆ, ದುಡಿಯುವ ಮಹಿಳೆಯರ ಸಮಸ್ಯೆಗಳನ್ನು




ಕೇಂದ್ರವಾಗಿಟ್ಟುಕೊಂಡು ಈ ಕೇಂದ್ರವು ನಡೆಸುತ್ತ ಬಂದ ಸಾಮೂಹಿಕ ಸಂಘಟಿತ ಹೋರಾಟಕ್ಕೆ ಮುಖವಾಣಿಯಾಗಿ ಹುಟ್ಟಿದ್ದು 'ಅಚಲ ದ್ವೈಮಾಸಿಕ ಮಹಿಳಾ ಪತ್ರಿಕೆ. ಮಹಿಳಾ ಸಮಾನತೆಗಾಗಿ ಹಕ್ಕೊತ್ತಾಯಿಸುವ ಹೋರಾಟದಲ್ಲಿ, ಸ್ತ್ರೀಯರ ಧ್ವನಿಗಳಿಗೆ ಒಂದು ವೇದಿಕೆಯಾಗಿ ಬೆಳೆದು ಬಂದ 'ಅಚಲ' ಇತ್ತೀಚೆಗೆ ತನ್ನ ಹತ್ತನೆಯ ಹುಟ್ಟು ಹಬ್ಬವನ್ನು ಆಚರಿಸಿತು. ಅಚಲ ನಡೆದು ಬಂದ ಹಾದಿಯ ಎಡರು, ತೊಡರುಗಳನ್ನು ಸಾಧನೆಯ ಮಿತಿಗಳನ್ನು, ಸಾಗಬೇಕಿರುವ ಹಾದಿಯ ಬರಲಿರುವ ಸ್ವರೂಪವನ್ನು ಗುರುತಿಸಿಕೊಳ್ಳುವ ಆತ್ಮವಿಮರ್ಶನೆಯ ಯತ್ನವಾಗಿ ಈ ದಶಮಾನೋತ್ಸವದ ಸಂದರ್ಭದಲ್ಲಿ "ಮಹಿಳೆ ಮತ್ತು ಸಮೂಹ ಮಾಧ್ಯಮಗಳು" ಎಂಬ ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳಲಾಯಿತು. ಕರ್ನಾಟಕ ಪತ್ರಿಕಾ ಅಕಾಡೆಮಿಯ ಸಹಯೋಗದೊಂದಿಗೆ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ಕಳೆದ ಫೆಬ್ರವರಿ 18, 1996ರಂದು ಬೆಂಗಳೂರಿನಲ್ಲಿ ಸೆಂಟ್ರಲ್ ಕಾಲೇಜು ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಆ ವಿಚಾರ ಸಂಕಿರಣದಲ್ಲಿ ಹೊಮ್ಮಿಬಂದ ವಿಚಾರಗಳ ಸಂಕ್ಷಿಪ್ತ ವರದಿ ಇದು.

ಫೆಬ್ರವರಿ 18 ರಂದು ಭಾನುವಾರ ಬೆಳಿಗ್ಗೆ, ಈ ವಿಚಾರ ಸಂಕಿರಣವನ್ನು ಉದ್ಘಾಟಿಸಿ, ಗ್ರಾಮೀಣಾಭಿವೃದ್ಧಿ ಸಚಿವ ಶ್ರೀ ಎಂ.ಪಿ. ಪ್ರಕಾಶ್, ಮಹಿಳಾ ಚಳುವಳಿ ಮತ್ತು ಮಹಿಳಾ ಸಮಾನತೆಯ ಪ್ರಶ್ನೆಗಳನ್ನು ತಾತ್ವಿಕವಾಗಿ ವಿಶ್ಲೇಷಿಸಿ, ಅವುಗಳ ದಿಕ್ಕು ರೀತಿ, ಗುರಿಗಳನ್ನು ಗುರುತಿಸಿ, ಸ್ಪಷ್ಟ ಪಡಿಸಿಕೊಳ್ಳಬೇಕಾದ ಅಗತ್ಯವನ್ನು ವಿವರಿಸಿದರು.

ಪಶು ಸಂಗೋಪನೆಯ ಸಂಸ್ಕೃತಿ ಕೃಷಿ ಸಂಸ್ಕೃತಿಯಾಗಿ ಬದಲಾದ ಮಹಾನ್ ಆರ್ಥಿಕ ಕ್ರಾಂತಿಯ ಅವಧಿಯಲ್ಲಿ ಸಮಾಜ ಆರ್ಥಿಕವಾಗಿ ವಿಕಾಸ ಹೊಂದಿದ ರೀತಿಯಲ್ಲೇ ಅಸಮಾನತೆ, ಶೋಷಣೆಗಳೂ ಮಾನವ ಸಮಾಜದ ಅಂಗಗಳಾಗಿ ಬೆಳೆದುದನ್ನು ಅವರು ವಿಶ್ಲೇಷಿಸಿದರು. ಭಾರತದ ಚರಿತ್ರೆಯಲ್ಲಿ ಎಲ್ಲ ಸುಧಾರಕ ಮತ್ತು ಪ್ರಗತಿಪರ ಚಳುವಳಿಗಳಲ್ಲಿ ತೋರಿಕೆಗೂ ವಾಸ್ತವಕ್ಕೂ ಇರುವ ಅಂತರವನ್ನು ಗುರುತಿಸಿದ ಅವರು, ಪಾಶ್ಚಿಮಾತ್ಯ ಮಹಿಳಾ ಚಳುವಳಿಯ ಮಾದರಿಗಳು ಹೆಣ್ಣುಗಂಡುಗಳ ನಡುವಿನ ನಿರ್ದಿಷ್ಟ ರೀತಿಯ ನಡವಳಿಕೆಯ ನಯ ನಾಜೂಕುಗಳಲ್ಲಿನ ಸಮಾನತೆಗೆ ಮಾನ್ಯತೆ ನೀಡುತ್ತದೆ. ನಿಜವಾದ ಮೂಲಭೂತ ಅಸಮಾನತೆ, ಶೋಷಣೆಗಳ ಕಾರಣಗಳನ್ನು ಕಂಡು ಹಿಡಿದು ಅವುಗಳ ವಿರುದ್ಧ ತಾತ್ವಿಕವಾದ

ಪರಿಣಾಮಕಾರಿ ಹೋರಾಟಗಳನ್ನು ಹುಟ್ಟುಹಾಕಲು ಬೇಕಾದಂಥ ಕೆಚ್ಚಾಗಲಿ, ಕ್ರಿಯಾಶೀಲತೆಯನ್ನಾಗಲಿ ಅವು ಹುಟ್ಟು ಹಾಕಲಾರವು. ಇಂಥ ಪ್ರಗತಿಯ ತೋರಿಕೆಗಳಲ್ಲಿ ಮಹಿಳೆಯರು ದುಡಿಮೆ ಮತ್ತಿತರ ಕ್ಷೇತ್ರಗಳಲ್ಲಿ ತೊಡಗಿಕೊಂಡದ್ದು ಕಂಡುಬಂದರೂ ರಾಜಕೀಯ ಅಧಿಕಾರದ ನೆಲೆಯಿಂದ ದೂರವೇ ಉಳಿದು ಬರುತ್ತಿರುವುದು ಭಾರತದ ಎಲ್ಲ ಬಗೆಯ ಚಳುವಳಿಗಳಲ್ಲಿರುವ ದೊಡ್ಡ ದುರಂತ. ಆದ್ದರಿಂದ ಮಹಿಳಾ ಸಮಾನತೆಯ ಪ್ರಶ್ನೆಯನ್ನು ನಾವು ವಿಚಾರ ಮಾಡುವಾಗ ಪ್ರಗತಿಪರತೆಯ ವೇದಿಕೆಯ ತೋರಿಕೆ ಮತ್ತು ವೈಯಕ್ತಿಕ ಬದುಕಿನಲ್ಲಿ ಅದರ ವಿರುದ್ಧವಾದ ಗೊಂದಲಕರ ನಡವಳಿಕೆ ಗಳಿಸಿದಂತೆ ಎಚ್ಚರ ವಹಿಸಬೇಕೆಂದೂ, ಅವರು ಸೂಚಿಸಿದರು.

ಹತ್ತನೆಯ ವರ್ಷದ ಅಚಲ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿದ ಮೈಸೂರು ವಿಶ್ವವಿದ್ಯಾನಿಲಯದ ಮಹಿಳಾ ಅಧ್ಯಯನ ಕೇಂದ್ರದ ನಿರ್ದೇಶಕಿ ಶ್ರೀಮತಿ ರಾಮೇಶ್ವರಿ ವರ್ಮ ಅವರು, ಹತ್ತು ವರ್ಷಗಳ ಸುದೀರ್ಘ ಅವಧಿಯಲ್ಲಿ ಅಚಲದ ಸಂಚಿಕೆಗಳಲ್ಲಿ ಪ್ರತಿಪಾದಿತವಾಗಿರುವ ವಿಷಯ ವೈವಿಧ್ಯವನ್ನು ಉದಾಹಣೆಗಳೊಂದಿಗೆ ವಿವರಿಸಿದರು. ಮಹಿಳಾ ಚಳುವಳಿಯು ಬೆಳೆದುಬಂದ ಬಗೆಯನ್ನು ಗುರುತಿಸಲು, ಹಾಗೂ ಒಂದು ದಶಕದ ಸಾಮಾಜಿಕ, ರಾಜಕೀಯಾರ್ಥಿಕ ಆಗುಹೋಗುಗಳನ್ನು ದಾಖಲಿಸಲು ಅಚಲ ತೋರಿರುವ ಪರಿಶ್ರಮವನ್ನು ಗುರುತಿಸಿ ಪತ್ರಿಕೆಯನ್ನು ಅಭಿನಂದಿಸಿದರು. ಉದ್ಘಾಟನೆ ಸಮಾರಂಭದ ಅಧ್ಯಕ್ಷರಾಗಿದ್ದ, ಕರ್ನಾಟಕ ಪತ್ರಿಕಾ ಅಕಾಡೆಮಿಯ ಅಧ್ಯಕ್ಷ ಶ್ರೀ ಶ್ರೀಧರ್ ಆಚಾರ್ ಅವರು ಪತ್ರಿಕಾ ಅಕಾಡೆಮಿ ಇಂಥ ಪತ್ರಿಕೆಯೊಂದರ ಜೊತೆ ಸೇರಿದ್ದಕ್ಕೆ ತಾತ್ವಿಕ ಸಮರ್ಥನೆ ನೀಡಿದರು. ಮಹಿಳೆಯರ ಸಮಸ್ಯೆಗಳ ಗಂಭೀರ ಚರ್ಚೆಯ ವೇದಿಕೆಯಾಗಿ ಅಚಲ ಪತ್ರಿಕೆ ತನ್ನ ರೂಪ ಕಿರಿದಾದರೂ, ಮಹಿಳೆಯರ ಸಾಮಾಜಿಕ, ಸಾಂಸ್ಕೃತಿಕ, ವಿಚಾರಗಳಿಗೆ ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ ದೊರೆಯಲಾರದಂಥ ಸ್ಥಳವನ್ನು ಕಲ್ಪಿಸಬಲ್ಲ ಹಾಗೂ ಮಹಿಳಾ ಜಾಗೃತಿಯಲ್ಲಿ ಹತ್ತು ವರ್ಷದಿಂದ ಸಕ್ರಿಯವಾಗಿ ತೊಡಗಿಕೊಂಡಿರುವ ವೈಶಿಷ್ಟ್ಯ ಈ ಪತ್ರಿಕೆಯದು. ಆ ಕಾರಣದಿಂದಲೇ ಅಕಾಡೆಮಿಗೆ ಕೂಡ ಇಂಥ ಪತ್ರಿಕೆಯೊಂದಿಗೆ ತನ್ನನ್ನು ಜೋಡಿಸಿಕೊಳ್ಳುವುದು ಅರ್ಥಪೂರ್ಣವಾಗಿ ಕಂಡಿದೆ ಎಂದು ಅವರು ಅಚಲಕ್ಕೆ ಶುಭ ಕೋರಿದರು.

ಮೊದಲ ಗೋಷ್ಠಿಯು 'ಮಹಿಳೆ ಮತ್ತು ಮುದ್ರಣ ಮಾಧ್ಯಮ' ಎಂಬ ವಿಷಯಕ್ಕೆ ಸಂಬಂಧಿಸಿದ್ದು ಅದರಲ್ಲಿ "ಪತ್ರಿಕೆಗಳು ಮತ್ತು ಮಹಿಳಾ ಚಳುವಳಿ" ಎಂಬ ವಿಷಯದ ಬಗ್ಗೆ, ಸುಪ್ರಸಿದ್ಧ ಲೇಖಿಕಿ, ವಿಮರ್ಶಕಿ ಡಾ. ವಿಜಯಾ ದಬ್ಬೆಯವರೂ, "ಜಾಗತೀಕರಣದ ಹಿನ್ನೆಲೆಯಲ್ಲಿ ಪತ್ರಿಕೆಗಳು ಮತ್ತು ಮಹಿಳೆ" ಎಂಬ ವಿಷಯದ ಬಗ್ಗೆ ಪ್ರಜಾವಾಣಿ ಪತ್ರಕರ್ತ ಶ್ರೀ ಜಿ.ಎನ್. ಮೋಹನ್‌ರವರೂ ಪ್ರಬಂಧಗಳನ್ನು ಮಂಡಿಸಿದರು.

ಸಮಾಜಪ್ರಗತಿ, ಸಾಮಾಜಿಕ ಪರಿವರ್ತನೆ ಪತ್ರಿಕೆ ಮತ್ತು ಮಹಿಳಾ ಚಳುವಳಿ ಎರಡಕ್ಕೂಅನ್ವಯಿಸಬಹುದಾದ ಸಮಾನ ಗುರಿ. ದೊಡ್ಡ ಪ್ರಮಾಣದಲ್ಲಿ ಸಾಮಾಜಿಕ ವಿಷಮತೆಗಳನ್ನು ಬದಲಾಯಿಸುವ ಈ ಹೋರಾಟದಲ್ಲಿ ಸಮಸ್ಯೆಗಳ ಮೇಲೆ ಸ್ಪಷ್ಟ ಬೆಳಕು ಚೆಲ್ಲಿ, ವಿಶ್ಲೇಷಿಸುವುದು, ಜನ ಸಮುದಾಯದಲ್ಲಿ ವೈಚಾರಿಕ ಸಂವಾದ ನಡೆಸಲು ಅನುವಾಗವುದು ಪತ್ರಿಕೆಗಳ ಗುರಿಯಾದರೆ ಮಹಿಳಾ ಚಳುವಳಿ ಇನ್ನೂ ಒಂದಷ್ಟು ಮುಂದೆ ಹೋಗಿ, ಬದಲಾವಣೆಗೆ ಹೋರಾಡಲು ಜನತೆಯನ್ನು ಒಳಗೊಳ್ಳಲು ಯತ್ನಿಸುತ್ತದೆ. ಆದರೆ ಸಮಕಾಲೀನ ಆರ್ಥಿಕ ನೀತಿಗಳ ಫಲವಾಗಿ ಸ್ತ್ರೀಯರ ಸಮಸ್ಯೆಗಳಿಗೆ, ಸ್ತ್ರೀ ಪತ್ರಕರ್ತರ ಬರಹಗಳಿಗೆ ಇಂದಿನ ಪತ್ರಿಕೋದ್ಯಮದಲ್ಲಿ ಹೆಚ್ಚು ಸ್ಥಾನ, ಸ್ಥಳ ದೊರೆತಿದ್ದರೂ, ಸ್ತ್ರೀ ದೃಷ್ಟಿಯೊಂದರ ಅಭಾವದಿಂದಾಗಿ ಸ್ತ್ರೀಯರ ಪ್ರಗತಿಯ ಆಶಯಕ್ಕೂ, ಪತ್ರಿಕೆಗಳ ವಿವಿಧ ವರದಿ, ವಸ್ತು ಜಾಹಿರಾತು, ಚಿತ್ರಗಳು ಜನಕ್ಕೆ ತಲುಪಿಸುವ ಆಶಯಗಳಿಗೂ ನಡುವೆ ಕಂದರ ಏರ್ಪಟ್ಟಿದೆ ಎಂಬುದನ್ನು ವಿಜಯಾ ದಬ್ಬೆ ಉದಾಹರಣೆಗಳೊಂದಿಗೆ ಚಿತ್ರಿಸಿದರು. ಇವತ್ತಿನ ಸಂದರ್ಭದಲ್ಲಿ ಸ್ತ್ರೀಯರ ನಡುವಿನ ಸಂವಹನೆಗೆ ಲಭ್ಯವಿರುವ ಮಾಹಿತಿ, ಅವಕಾಶಗಳನ್ನು ಮಹಿಳಾ ಪತ್ರಿಕೆಗಳು ಇನ್ನೂ ಸಮರ್ಪಕವಾಗಿ ಬಳಸಿಕೊಳ್ಳಬೇಕಾದ್ದು ಅವಶ್ಯಕ ಎಂದರು.

ಜಾಗತೀಕರಣ, ಆರ್ಥಿಕ ಉದಾರನೀತಿ ಮತ್ತು ಮುಕ್ತ ಮಾರುಕಟ್ಟೆಯ ಹೊಸ ಅಂಶಗಳ ರೂಪದಲ್ಲಿ ಪಶ್ಚಿಮದ ಬಂಡವಾಳಶಾಹಿ ಲಕ್ಷಣಗಳೆಲ್ಲ ಭಾರತದಂಥ ತೃತೀಯ ಜಗತ್ತಿನ ಪತ್ರಿಕೆಗಳಲ್ಲಿ ತರುತ್ತಿರುವ ಬದಲಾವಣೆಗಳ ಸ್ವರೂಪವನ್ನು ವಿಮರ್ಶಿಸಿದ ಜಿ.ಎನ್. ಮೋಹನ್, ಸಾಮಾಜಿಕ ಪ್ರಗತಿಗೆ, ಎಲ್ಲ ವಿಧವಾದ ಅಸಮಾನತೆಗಳ ನಿವಾರಣೆಗೆ ಒಂದು ವಾಹಕವಾಗಿ ಒದಗಬೇಕಾಗಿದ್ದ ತೃತೀಯ ಜಗತ್ತಿನ ಪತ್ರಿಕೋದ್ಯಮ, ಬಂಡವಾಳ ಶಾಹಿಯ ಆಕ್ರಮಣಕ್ಕೆ ಸಾಧನವಾಗಿದ್ದು ಈ ಆಕ್ರಮಣಶೀಲತೆಯ ಎಲ್ಲ ದುಷ್ಪರಿಣಾಮಗಳನ್ನು ಅವು ಮಹಿಳೆಯನ್ನು ಮಹಿಳಾ ಸಮಸ್ಯೆಗಳ ಕುರಿತುತಳೆದಿರುವ ಧೋರಣೆಯಲ್ಲಿ ಗುರುತಿಸಲು

ಸಾಧ್ಯವೆಂದರು. ಸ್ತ್ರೀಯೇ ಒಂದು ಸರಕಾಗುತ್ತಿರುವ ಸ್ಥಿತಿಯ ಅಪಾಯಕಾರಿ ಭವಿಷ್ಯದತ್ತ ಅವರು ಎಚ್ಚರಿಸಿದರು. ಈ ಪ್ರಬಂಧಗಳ ಬಗ್ಗೆ ಪ್ರತಿಕ್ರಿಯಿಸಲು ಆಹ್ವಾನಿತರಾಗಿ ಬಂದಿದ್ದವರ ಪೈಕಿ 'ಪತ್ರಿಕೆಗಳಲ್ಲಿ ಮಹಿಳಾ ಮೌಲ್ಯಗಳು' ಎಂಬ ವಿಷಯದ ಬಗ್ಗೆ ಫ್ರಂಟ್‌ಲೈನ್ ಪತ್ರಿಕೆಯ ಶ್ರೀಮತಿ ಪಾರ್ವತಿ ಮೆನನ್ ತಮ್ಮ ಕಿರು ಟಿಪ್ಪಣಿಯನ್ನು ಮಂಡಿಸಿದರು. ಮತ್ತು ಕನ್ನಡಪ್ರಭ ಪತ್ರಿಕೆಯ ಶ್ರೀ ಜಯರಾಮ ಅಡಿಗ ಅವರು ಈ ಮೂರು ಪ್ರಬಂಧಗಳ ಬಗ್ಗೆ ತಮ್ಮ ವಿಚಾರಗಳನ್ನು ಕೇಳುಗರೊಂದಿಗೆ ಹಂಚಿಕೊಂಡರು.

ಮಧ್ಯಾಹ್ನ ನಡೆದ ಎರಡನೆಯ ಗೋಷ್ಠಿ "ಧ್ವನಿ -ದೃಶ್ಯ ಮಾಧ್ಯಮಗಳು ಮತ್ತು ಮಹಿಳೆ" ಎಂಬ ವಿಷಯದತ್ತ ಕೇಂದ್ರಿತವಾಗಿತ್ತು. ಈ ಗೋಷ್ಠಿಯಲ್ಲಿ "ಧ್ವನಿ - ದೃಶ್ಯ ಮಾಧ್ಯಮಗಳಲ್ಲಿ ಹೆಣ್ಣಿನ ಚಿತ್ರಣ" ದಲ್ಲಿ ಕಂಡುಬರುವ ಮೂಲಭೂತವಾದ ಸ್ತ್ರೀ ವಿರೋಧಿಯಾದ ಅಂಶಗಳನ್ನು ದೂರದರ್ಶನ, ಆಕಾಶವಾಣಿ ಮತ್ತು ಚಲನಚಿತ್ರ ಮಾಧ್ಯಮಗಳ ದೃಷ್ಟಾಂತಗಳ ಮೂಲಕ ಹೃದ್ಯವಾಗಿ ಚಿತ್ರಿಸಿದವರು ಚಲನಚಿತ್ರ ಸಾಹಿತಿ, ನಿರ್ದೇಶಕರಾದ ಶ್ರೀ ಅಬ್ದುಲ್ ರೆಹಮಾನ್ ಪಾಷಾ. ಹೆಣ್ಣಿನ ಕೌಟುಂಬಿಕ ಸಾಂಪ್ರದಾಯಿಕ ನೆಲೆಗಳಿಗೇ, ರೂಢಿಗತ ಮೌಲ್ಯಗಳಿಗೇ ಒತ್ತು ಕೊಡುವಂಥ ಸಿನಿಮಾ ಅಥವಾ ದೂರದರ್ಶನ ಧಾರಾವಾಹಿಗಳು, ಆಕೆಯ ಪ್ರಗತಿಪರತೆಯನ್ನು, ಬೆಳವಣಿಗೆಯ ಸಾಧ್ಯತೆಗಳನ್ನು ಕುರಿತು ನಕಾರಾತ್ಮಕ ನಿಲುವು ತಳೆದಿರುವ ಬಗೆಗಳನ್ನು ಅವರು ವಿಶ್ಲೇಷಿಸಿದರು. ಉತ್ಪಾದಿತ ಸರಕುಗಳ ಮಾರಾಟಕ್ಕೆ ಸಾಧನವಾಗಿ ಸ್ತ್ರೀದೇಹವನ್ನು ಜಾಹೀರಾತುದಾರರು ಬಳಸಿಕೊಳ್ಳುವ ಬಗೆ, ಸೌಂದರ್ಯದ ದೈಹಿಕರೂಪಕ್ಕೆ ಕೊಡಲಾಗುವ ಅಹಿತಕಾರಿ ಒತ್ತು, ಮತ್ತು ಗಂಡಿನ ಜೊತೆಗಿನ ಹೆಣ್ಣಿನ ಸ್ಥಾನವನ್ನು ಕೀಳಾಗಿ ಪಲ್ಲಟಗೊಳಿಸುವತ್ತ ಬೀಳುತ್ತಿರುವ ಬಂಡವಾಳಶಾಹಿ ಒತ್ತಡಗಳಿಂದಾಗಿ, ಸಮಾಜದಲ್ಲಿ ವಿಶೇಷವಾಗಿ ಯುವ ಪೀಳಿಗೆಯ ಮೇಲೆ ಉಂಟಾಗುತ್ತಿರುವ ಕೆಟ್ಟ ಪರಿಣಾಮಗಳನ್ನು ಅವರು ವಿಶ್ಲೇಷಿಸಿದರು. ಸ್ಯಾಟಲೈಟ್ ಟಿವಿ ಛಾನೆಲ್ಲುಗಳ ಮೂಲಕ ದಾಳಿ ಇಡುತ್ತಿರುವ ಸಿನಿಮಾ ಸಂಸ್ಕೃತಿಯ ಸ್ತ್ರೀ ಪ್ರಗತಿಗೆ ಮಾರಕವಾಗುವ ಬಗೆಗಳನ್ನು ವ್ಯಾಖ್ಯಾನಿಸಿದರು.

ಇದೇ ಗೋಷ್ಠಿಯ ಮತ್ತೊಬ್ಬ ಪ್ರಬಂಧಕಾರರಾದ ಎನ್.ಡಿ. ಟಿ.ವಿ. ಉದ್ಯೋಗಸ್ಥೆಯಾದ ಶ್ರೀಮತಿ ನೂಪುರ ಬಸು ಅವರು "WOmen Reaching for the Skies" ಎಂಬ ವಿಷಯವನ್ನು ಕುರಿತು ತಮ್ಮ ವಿಚಾರಗಳನ್ನು ಪ್ರತಿಪಾದಿಸಿದರು. ಉಪಗ್ರಹ ಟಿ.ವಿ. ಹಾಗೂ ಸಂವಹನೆಯ ತಾಂತ್ರಿಕತೆಯಲ್ಲಿನ ನವೀನ ಆವಿಷ್ಕಾರಗಳಲ್ಲಿ, ಸಾಕಷ್ಟು ಅರ್ಹತೆ ಗಳಿಸಿ, ಈ ಮಾಧ್ಯಮಗಳೇ ನಿರ್ಮಾಪಕರಾಗಿ, ನಿರ್ದೇಶಕರಾಗಿ, ತಂತ್ರಜ್ಞರಾಗಿ ದುಡಿಯುತ್ತಿರುವ ಮಹಿಳೆಯರ ಧೋರಣೆಗಳು ಎಷ್ಟರ ಮಟ್ಟಿಗೆ ಸ್ತ್ರೀ ದೃಷ್ಟಿಕೋನವೊಂದನ್ನು ನೋಡುಗರಲ್ಲಿ ರೂಪಿಸಲು ಸಾಧ್ಯ; ಸ್ವತಃ ಒಂದು ಪುರುಷ ಕೇಂದ್ರಿತ ಚಿಂತನಾ ವ್ಯವಸ್ಥೆಯ ಒಳಗೆ ದುಡಿಯುವಲ್ಲಿ ಇವರ ಸ್ವಾಭಿವ್ಯಕ್ತಿಗೆ ಮತ್ತು ಸೃಜನಶೀಲತನೆಗೆ ಇರುವ ಅವಕಾಶಗಳೇನು ಎಂಬುದನ್ನು ಸ್ವಾನುಭವದ ನೆಲೆಯಿಂದ ಶ್ರೀಮತಿ ನೂಪುರ್ ವಿಶ್ಲೇಷಿಸಿದರು.

ಎರಡನೆಯ ಗೋಷ್ಠಿಯ ಪ್ರಬಂಧಗಳನ್ನು ಕುರಿತಂತೆ ಪ್ರತಿಕ್ರಿಯಿಸಿದವರು ರಂಗ ಪತ್ರಕರ್ತೆಯಾದ ಶ್ರೀಮತಿ ಲಕ್ಷ್ಮೀ ಚಂದ್ರಶೇಖರ್. ಬೆಂಗಳೂರು ವಿಶ್ವವಿದ್ಯಾನಿಲಯದ ಸಮೂಹ ಮಾಧ್ಯಮ ವಿಭಾಗದ ಮುಖ್ಯಸ್ಥರಾದ ಶ್ರೀಮತಿ ಲೀಲಾ ರಾವ್ ಈ ಗೋಷ್ಠಿಯ ಅಧ್ಯಕ್ಷರಾಗಿದ್ದರು.

ಸಂಜೆಯ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಮಾಜಿ ಸಣ್ಣ ನೀರಾವರಿ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಅಚಲ ಪತ್ರಿಕೆಯ ಆರಂಭದ ಸಂದರ್ಭದಲ್ಲೂ ತಾವು ಪಾಲುಗೊಂಡಿದ್ದನ್ನು ನೆನಪಿಸಿಕೊಂಡು, ಈ ಪತ್ರಿಕೆ ನಿಲ್ಲದೆ ನಡೆದು ಬಂದ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದರು. ಸಮಾರಂಭದ ಅಧ್ಯಕ್ಷರಾಗಿದ್ದ ಕರ್ನಾಟಕ ಹೈಕೋರ್ಟಿನ ನ್ಯಾಯಾವಾದಿ ಶ್ರೀಮತಿ ಹೇಮಲತಾ ಮಹಿಷಿ, ಮಹಿಳಾ ಪತ್ರಿಕೆಗಳು, ಎಂಬ ಪ್ರತ್ಯೇಕತೆಯನ್ನು ಎತ್ತಿ ಹಿಡಿಯಬೇಕಾದ್ದು ಕೇವಲ ಇಂದಿನ ಸಾಂಸ್ಕೃತಿಕ ಪರಿಸರದಲ್ಲಿನ ವೈಪರೀತ್ಯಗಳ ಫಲವೆಂದೂ, ಮುಂದೊಂದುದಿನ ಇಂಥ ಎಲ್ಲ ಬಗೆಯ ಪ್ರತ್ಯೇಕತೆಗಳೂ ಅನಗತ್ಯವಾಗುವ ರೀತಿಯಲ್ಲಿ ಹೊಸ ಸಮಾಜ ನಿರ್ಮಾಣ ಮಾಡಬೇಕಾದ್ದು ಅವಶ್ಯಕವೆಂದೂ ಸೂಚಿಸಿದರು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ರೂಪಿಸಿದ್ದ ಈ ಕಾರ್ಯಕ್ರಮದಲ್ಲಿ ಆಯಾಯಾ ಕ್ಷೇತ್ರದಲ್ಲಿ ಸಾಕಷ್ಟು ದುಡಿದು, ನುರಿತ ಅನುಭವವಿದ್ದ ವಿದ್ವಾಂಸರ ವಿಚಾರ ಮಂಡನೆಯಿದ್ದು ಪ್ರೇಕ್ಷಕರು ಸಂಖ್ಯೆಯಿಂದ ಅಲ್ಪದಿದ್ದರೂ ಚರ್ಚೆಯಲ್ಲಿ ಕ್ರಿಯಾಶೀಲವಾಗಿ ಸ್ಪಂದಿಸಿದ್ದರಿಂದ ಕಾರ್ಯಕ್ರಮವು ಹೆಚ್ಚು ಅರ್ಥಪೂರ್ಣವೆನಿಸಿತು.

• ಸುಮಿತ್ರ

# ಮಹಿಳೆಯ ಸ್ವ-ಅಭಿವ್ಯಕ್ತಿಯತ್ತ ಒಂದು ಅರ್ಥಪೂರ್ಣ ಯತ್ನ

• ಬಿ.ಎಸ್. ಸುಮಿತ್ರಾಬಾಯಿ

ಮಾರ್ಚ್ ತಿಂಗಳೆಂದರೆ ಮಹಿಳಾ ದಿನಾಚರಣೆಗಳ ಸಡಗವೇ ಸಡಗರ. ಕಳೆದ ಮಾರ್ಚ್ 29, 30 ರಂದು ಮೈಸೂರಿನಲ್ಲಿ ನಡೆದ ಮಹಿಳೆ -ಪರಿಸರ -ಸಾಹಿತ್ಯ ಎಂಬ ವಿಷಯದ ಕಮ್ಮಟ ಈ ಆಚರಣೆಗೆ ಅರ್ಥತರಲು ನಡೆಸಿದ ಹೊಸ ಬಗೆಯ ಪ್ರಯತ್ನವಾಗಿತ್ತೆನ್ನಬಹುದು.

ಸಾಂಪ್ರದಾಯಿಕ ಭಾಷಣಗಳು, ವಿಚಾರ ಸಂಕಿರಣಗಳು, ಕಮ್ಮಟಗಳು ಸಂವಾದ ಗೋಷ್ಠಿಗಳಲ್ಲಿ ಕಂಡು ಬರುವ "ವೇದಿಕೆ-ಉಪಚಾರ"ಗಳ ವಿಧಿ-ವಿಧಾನಗಳನ್ನು ಉದ್ದೇಶ ಪೂರ್ವಕವಾಗಿ ದೂರವಿಟ್ಟು, ಕನ್ನಡಿಗರಿಗೆ ಸಾಕಷ್ಟು ಪರಿಚಿತರಾದ ಲೇಖಕಿಯರಿಗೆ ತಮ್ಮ ಬದುಕು-ಬರಹಗಳ ಬಗ್ಗೆ ತಾವೇ ಹೇಳಿಕೊಳ್ಳುತ್ತ ಸ್ವ-ಶೋಧನೆಗೆ ಅವಕಾಶ ಕಲ್ಪಿಸಿದ್ದ ವಿಶಿಷ್ಟ ಕಮ್ಮಟ ಇದಾಗಿತ್ತು. ಕರ್ನಾಟಕ ಲೇಖಕಿಯರ ಸಂಘ, ಮೈಸೂರು ವಿಶ್ವವಿದ್ಯಾನಿಲಯ ಮಹಿಳಾ ಅಧ್ಯಯನ ವಿಭಾಗ ಮತ್ತು ಮೈಸೂರಿನ ಸಮತಾ ವೇದಿಕೆಗಳು ಒಟ್ಟಾಗಿ ಈ ಕಮ್ಮಟವನ್ನು ಏರ್ಪಡಿಸಿದ್ದವು.

ಆಸಕ್ತಿಯಿಂದ ಕೇಳುವ ಓದುಗರು, ಸಾಹಿತ್ಯಾಸಕ್ತರು, ಸಂಶೋಧಕಿಯರು ಮತ್ತು ವಿಮರ್ಶಕರ ನಡುವೆ ಈ ಲೇಖಕಿಯರು ನಿರಾಳವಾಗಿ ಕುಳಿತು ತಮ್ಮ ಬದುಕನ್ನು, ಅದರ ನೋವು ನಲಿವುಗಳನ್ನು, ಅದರ ಅಂಗವಾಗಿ ಹೊಮ್ಮಿದ ತಮ್ಮ ಬರಹವನ್ನು ಕುರಿತು ಹೇಳಿಕೊಳ್ಳಬಹುದಿತ್ತು. ಕನ್ನಡದ ಲೇಖಕಿಯರ ಮಟ್ಟಿಗೆ ಇದೇನೂ ಸರಳ ಸಂಗತಿಯಲ್ಲ. ತಮ್ಮ ತಮ್ಮ ಭಿನ್ನ ಸಾಂಸ್ಕೃತಿಕ ನೆಲೆಗಳಲ್ಲಿನ ಹೆಣ್ಣಿನ ಸ್ಥಾನದ ಕಾರಣದಿಂದ ತಾವು ಎದುರಿಸಿದ ವಿರುದ್ಧ ಪರಿಸ್ಥಿತಿಗಳನ್ನು, ಅವುಗಳಿಂದ ತಾವು ಗಟ್ಟಿಗೊಂಡ ಬಗೆಗಳನ್ನು ನಿರ್ಭಿಡೆಯಾಗಿ ಬಹಿರಂಗವಾಗಿ ತೋಡಿಕೊಳ್ಳುವ ಈ ಆತ್ಮನಿವೇದನೆಯ ಕೆಲಸದಲ್ಲಿ ಕೆಲವೊಮ್ಮೆ ನೋವು -ಸಂಕೋಚ, ಮತ್ತು ಕೆಲವೊಮ್ಮೆ ಹೆಮ್ಮೆ ಕಂಡು ಬರುತ್ತಿತ್ತು.

ಮೊದಲಿಗೆ ಎಲ್ಲರನ್ನು ಪ್ರೀತಿಯಿಂದ ಬರಮಾಡಿಕೊಂಡವರು ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ನಾಗಮಣಿ ಎಸ್. ರಾವ್. ಇದು ಬರಿಯ 'ಮಹಿಳಾ ದಿನಾಚರಣೆ' ಅಲ್ಲ, ಇದು ಮಹಿಳಾ ಸಾಹಿತ್ಯ ಚರಿತ್ರೆ ರೂಪಿಸುವ ಕಡೆಗೆ ಮೊದಲ ಹೆಜ್ಜೆ ಆದೀತು ಎಂಬ ಆಶಯ ವ್ಯಕ್ತಪಡಿಸಿದರು. ನಂತರ ಮಾತನಾಡಿದ ರಾಮೇಶ್ವರಿ ವರ್ಮ ಮಹಿಳಾ ಅಧ್ಯಯನ ವಿಭಾಗದಿಂದ ತಾವು ಈ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ಮುಖ್ಯ ಕಾರಣ, ಮಹಿಳಾ ಅಧ್ಯಯನದ ಸಾರ್ಥಕ ವಿಧಾನವೊಂದನ್ನು ಕುರಿತ ತಮ್ಮ ಹುಡುಗಾಟವೇ ಎಂದರು. ಕರ್ನಾಟಕದ ಸಾಂಸ್ಕೃತಿಕ ಸಂದರ್ಭದೊಂದಿಗೆ ಇಲ್ಲಿ ಪ್ರಕಟವಾಗುವ ಲೇಖಕಿಯರ ಕೇಸ್ ಹಿಸ್ಟರಿಗಳು - ಆ ಹುಡುಕಾಟಕ್ಕೆ ಅರ್ಥ ನೀಡಿಯಾವೆಂದು ಅವರ ಹಾರೈಕೆಯಾಗಿತ್ತು.

ಈ "ಸಂವಾದ" ಹೇಗಿರಬೇಕು, ಹೇಗೆ ಸಾಗಬೇಕು ಎಂಬುದಕ್ಕೆ ತಾವು ಯಾವುದೇ ಪೂರ್ವಯೋಜಿತ ಚೌಕಟ್ಟನ್ನು ಹೇರಿಲ್ಲ. ಬದಲಾಗಿ ಲೇಖಕಿ-ಓದುಗ-ವಿಮರ್ಶಕರ ಪರಸ್ಪರ ಪ್ರತಿಕ್ರಿಯೆಗಳ ಮೂಲಕ ಮೂಲಕ ತನ್ನಿಂದತಾನೇ ಇದು ತನ್ನ ದಾರಿಯನ್ನೂ ಗುರಿಯನ್ನೂ ಕಂಡುಕೊಳ್ಳಬೇಕು ಎಂಬುದು ಕಾರ್ಯಕ್ರಮದ ಸಂಯೋಜಕಿ ಡಾ|| ವಿಜಯಾ ದಬ್ಬೆ ವ್ಯಕ್ತಪಡಿಸಿದ ಆಶಯ. ಈ ಪ್ರತಿಕ್ರಿಯೆಗಳು ಮಹಿಳೆಯರ ಸ್ವ-ಶೋಧನೆ, ಸ್ವ-ಅಭಿವ್ಯಕ್ತಿಗೆ ನೆರವಾಗಬೇಕು ಎಂಬುದು ಅವರ ಆಶಯವಾಗಿತ್ತು.

ಹೀಗೆ ಮೂರು ಸಂಘಟನೆಗಳ ನಾಯಕಿಯರ ಮುಪ್ಪುರಿ ಆಕಾಂಕ್ಷೆಗಳ ಹಿನ್ನೆಲೆಯಲ್ಲಿ ಆತ್ಮಕಥನವನ್ನು ಪ್ರಾರಂಭಿಸಿದ್ದು ಕಿರಿಯ ತಲೆಮಾರಿನ ಕತೆಗಾರ್ತಿ ನೇಮಿಚಂದ್ರ. ಎಳವೆಯಿಂದಲೂ ಮನೆಯ ಒಳ- ಹೊರಗಿನ ಪರಿಸರಗಳಲ್ಲಿ ಕಂಡು ಕಾಡಿಸಿದ ಹೆಣ್ಣಿನ ಬಗೆಗಿನ ತಾರತಮ್ಯ, ಅವರ ಬದುಕಿಗೆ ಕವಿದಿರುವ ಮೌನ, ನೋವು ಹತ್ತಿಕ್ಕುವಿಕೆ ಮತ್ತು ಉಬ್ಬಸ, ಕೀಳರಿಮೆಗಳನ್ನು ಮೀರುವ ಹಂಬಲದಿಂದಾಗಿ ಸ್ತ್ರೀವಾದ ತಮಗೆ ಹೊರಗಿನಿಂದ ಹೆಚ್ಚುವರಿ ತಿಳುವಾಗಿ ಬರುವ ಮೊದಲಿನಿಂದ

ತಮ್ಮ ಬದುಕಿನಲ್ಲೇ ರೂಪು ತಳೆದಿತ್ತೆಂದು ನೇಮಿಚಂದ್ರ ವ್ಯಾಖ್ಯಾನಿಸಿಕೊಂಡರು. ಹೆಣ್ಣಿನ ಲೈಂಗಿಕಾಭಿವ್ಯಕ್ತಿಗಳಿಗಿರುವ ನಿರ್ಬಂಧಗಳು, ತಾಯ್ತನದ ಸುತ್ತ ಬೆಳೆದಿರುವ ಮಿಥ್ಯಾ ಕಲ್ಪನೆಗಳು ಮುಂತಾದವು ತಮ್ಮ ಕತೆಗಳ ವಸ್ತುವಾಗಿ, ನಿಜದ ಶೋಧನೆಗೆ ನೆರವಾದದ್ದನ್ನು ವಿವರಿಸಿದರು. ಆದರೆ ಭಾವನಾತ್ಮಕವಾಗಿ ತಮ್ಮನ್ನು ಕಾಡಿಸಿದ ಸಂಗತಿಗಳ, ಅಂಥ ವ್ಯಕ್ತಿಗಳ ಬಗ್ಗೆ ಹೇಳುವಾಗ ಈ ನಿರರ್ಗಳ, ನಿಸ್ಸಂಕೋಚದ ಲೇಖಕಿಗೂ ಗಂಟಲು ಹಿಡಿದಂತೆ ಸಂಕೋಚ ಕಾಡುತ್ತಿದ್ದಂತಿತ್ತು.

ಇಂಥ ಸಂಕೋಚಗಳನ್ನು ಬುರಖಾ ತೆಗೆದಿಟ್ಟಂತೆ ಸಹಜವಾಗಿ ತೆಗೆದಿಟ್ಟು, ತಮ್ಮ ಬೆಳವಣಿಗೆಗೆ ಕಾರಣವಾದ ಮಹತ್ವದ ತಿರುವುಗಳು, ಸಂಬಂಧಗಳು, ಅವುಗಳಿಗೆ ಮೂಲವಾದ ವ್ಯಕ್ತಿಗಳು ಯಾರೇ ಇರಲಿ, ತೆಳುಹಾಸ್ಯದ ಲೇಪನದೊಂದಿಗೆ ತೆರೆದಿಟ್ಟವರು ಮತ್ತೊಬ್ಬ ಕತೆಗಾರ್ತಿ ಬಾನುಮುಷ್ತಾಕ್. ಮುಸ್ಲಿಂ ಸಂಸ್ಕೃತಿಯ ಹಿನ್ನೆಲೆಯಲ್ಲಿ ಹೆಣ್ಣಾಗಿ ತಮ್ಮ ಅನುಭವಗಳನ್ನು ಅವರು ತುಂಬ ಆಕರ್ಷಕ ರೀತಿಯಲ್ಲಿ ನಿರೂಪಿಸಿದಾಗ ಕೇಳುಗರಿಗೆ ವೇಳೆಯ ಪರಿವೆ ಮರೆತಿತ್ತು.

ಭಾನು ಅವರಿಗಿಂತ ಇನ್ನೂ ನೇರವಾಗಿ, ನಮ್ಮ ಇಡೀ ಸಾಂಸ್ಕೃತಿಕ ವ್ಯವಸ್ಥೆಯ ಒಳಸುಳಿಗಳಿಗೆ ಕಚಗುಳಿಯಿಟ್ಟು, ವಿಡಂಬಿಸಿ, ಗೇಲಿ ಮಾಡುತ್ತಲೇ ಲಮಾಣಿ ಜನತೆಯ ಹಿನ್ನೆಲೆಯಿಂದ ತಮ್ಮ ಬದುಕು- ಬರಹಗಳ ನೆಲೆರೂಪಗಳನ್ನು ವಿವರಿಸಿದ್ದು ಶಾಸಕಿ, ಲೇಖಕಿ, ಬಿ.ಟಿ. ಲಲಿತಾ ನಾಯಕ್. ಕೆಳವರ್ಗ- ಬುಡಕಟ್ಟುಗಳ ಜನ ಸಂಸ್ಕೃತೀಕರಣ, ನಗರೀಕರಣಕ್ಕೆ ಒಳಗಾದಾಗಿನ ಸಂಕೀರ್ಣ ಸ್ಥಿತಿಯನ್ನು ಅವರ ಸ್ವ-ಕಥನದಿಂದ ಕಾಣಬಹುದಿತ್ತು.

ಹಿರಿಯ ಲೇಖಕಿ, ಎಚ್.ಎಸ್. ಪಾರ್ವತಿಗೆ, ತಮಗೆ ಅರಿವಿಲ್ಲದೆ, ಉದ್ದೇಶ ಪೂರ್ವ ಪ್ರಯತ್ನವಿಲ್ಲದೆಯೇ ಸ್ತ್ರೀಪರವಾದ, ವೈಚಾರಿಕತೆಯೊಂದು ತಮ್ಮ ಬದುಕು ಬರಹಗಳಲ್ಲಿ ಬೆಳೆದು ಬಂದಿರುವ ಬಗ್ಗೆ ವಿಸ್ಮಯ, ಬರಹಗಳಲ್ಲಿ ಸಾಕಷ್ಟು ಪ್ರಗತಿಪರ ನಿಲುವಿನಿಂದ ಹೆಣ್ಣಿನ ಸಮಸ್ಯೆಗಳನ್ನು ತಾವು ಚಿತ್ರಿಸಿದ್ದರೂ ವಿಮರ್ಶಕರು ಅತ್ತ ಗಮನ ಹರಿಸಿಲ್ಲದ ಬಗ್ಗೆ ಸ್ವಲ್ಪ ನೋವು.

ಬೆಳಗಿನಿಂದ ನಾಲ್ಕು ಜನರ ಆತ್ಮ ಚರಿತ್ರೆಗಳನ್ನು ಕೇಳಿ ಬುದ್ಧಿ-ಮನಸ್ಸು ಭಾರವಾಗಿದ್ದರೂ, ರಾತ್ರಿ ಸಾರಾ ಅಬೂಬಕ್ಕರ್, ಕರಾವಳಿ ಮುಸ್ಲಿಮರಲ್ಲಿನ ಹೆಣ್ಣಿನ ಪರಿಸ್ಥಿತಿಗಳು ತಮ್ಮ ಬರಹಕ್ಕೆ ಪ್ರೇರಣೆಯಾಗಿರುವ ಬಗ್ಗೆ ಹೇಳತೊಡಗಿದಾಗ ಕೇಳುಗರು ಕುರ್ಚಿ ಬಿಡದೆ ಕುಳಿತು ಕೇಳಿದ್ದು ವಿಶೇಷವಾಗಿತ್ತು. ಕಾದಂಬರಿಗಳಲ್ಲಿ ಸಾರಾ ಎತ್ತಿದ ಪ್ರಶ್ನೆಗಳ ಸಂಪ್ರದಾಯಸ್ಥ ಮುಸ್ಲಿಂ ಸಮುದಾಯದ ನಡುವೆ ವಿವಾದಸ್ಪದವಾಗಿರುವ ಬಗೆ ಇಲ್ಲಿಯೂ ಬಹು ಚರ್ಚೆಗೆ ಆಸ್ಪದ ನೀಡಿತ್ತು.

ಮರುದಿನ 30 ರಂದು, ಕವಯತ್ರಿಯರ ದಿನವಾಗಿತ್ತು. ಶಶಿಕಲಾ ವೀರಯ್ಯಸ್ವಾಮಿ, ಮಾಲತಿ ಪಟ್ಟಣ ಶೆಟ್ಟಿ, ಎಚ್.ಎಲ್. ಪುಷ್ಪ, ಶೈಲಜಾ ಉಡಚಣ ಮತ್ತು ಸ. ಉಷಾ ಕಾವ್ಯವಾಗುತ್ತಿರುವ ತಮ್ಮ ಬದುಕಿನ ಅನುಭವಗಳನ್ನು ಕುರಿತು ಹಂಚಿಕೊಂಡರು. ತಾಯ್ತನ/ತಾಯಿಯಾಗದ್ದು ಹೆಣ್ತನಕ್ಕೆ ಸವಾಲು ಎಂಬು ರೂಢಿಗತ ನಂಬಿಕೆ ಹೇರಿದ ಒತ್ತಡಗಳಲ್ಲಿ ತಮ್ಮ ಸಾಂಸಾರಿಕ ಬದುಕಿನ ತಿರುವುಗಳನ್ನು ಗುರುತಿಸಿಕೊಂಡವರು ಶಶಿಕಲಾ. ಮಾಲತಿ ಪಟ್ಟಣಶೆಟ್ಟಿಯವರ ಸಮಸ್ಯೆ ಬೇರೆಯದು. ಭದ್ರವೆಂದು ನಂಬಿದ್ದ ಸಂಬಂಧಗಳು ಕಡಿದು ಹೋಗತೊಡಗಿದಂತೆ, ಕಲಿಕೆ, ಉದ್ಯೋಗ, ಬೋಧನೆ, ಕೊನೆಗೆ ಸಾಹಿತ್ಯ ರಚನೆ ಕೂಡ ತಮ್ಮನ್ನು ತಾವು ದೃಢಗೊಳಿಸಿಕೊಳ್ಳಲು ನೆರವಾಗಿರುವುದನ್ನು ಅವರು ವಿಶ್ಲೇಷಿಸಿದರು. ಕವಯತ್ರಿ ಪುಷ್ಪಾ ಅವರು ಇನ್ನೂ ಬದುಕಿನ ಮೊದಲ ಹಂತದಲ್ಲಿದ್ದು, ಅವರಿಗೆ ಓದು, ಪ್ರೇಮ, ಮದುವೆಗಳ ಸಂದರ್ಭದಲ್ಲಿ ಸಾಂಪ್ರದಾಯಿಕ ಪರಿಸರವನ್ನು ಎದುರಿಸಿದ್ದೇ ಮುಖ್ಯ ಅನುಭವ ಸಾಮಗ್ರಿ. ಸಮಾನ ಮನೋಭಾವದ ಸಂಗಾತಿಯೊಂದಿಗೆ ಈಕೆಗೆ ಸಾಹಿತ್ಯದ ದಾರಿ ಈಗ ನಿರಾಳ ಎಂಬುದು ಲೇಖಕಿಯರ ವಿವಿಧ ತಲೆಮಾರಿನವರ ಸವಲತ್ತಿನ ವ್ಯತ್ಯಾಸಕ್ಕೂ ಸೂಚನೆ ನೀಡುವಂತಿತ್ತು.

ವಯಸ್ಸಿನಿಂದ, ಕಾವ್ಯ ರಚನೆಯ ಅವಧಿಯ ದೃಷ್ಟಿಯಿಂದಲೂ ತಮ್ಮ ಹಿರಿತನವನ್ನು ಸ್ಥಾಪಿಸಿಕೊಂಡ ಶೈಲಜಾ ಉಡಚಣ, ಉತ್ತರ ಕರ್ನಾಟಕದಲಿನ ಉರ್ದು, ಮರಾಠಿ ಪ್ರಾಬಲ್ಯದ ನಡುವೆ ತಮ್ಮ ಕನ್ನಡ ಪ್ರೇಮ, ಕಲಿಕೆಯಲ್ಲಿ, ಕಾವ್ಯದಲ್ಲಿ ರೂಪ ತಳೆದ ಬಗೆಯನ್ನು ವಿವರಿಸಿದರು. ಗಂಡ, ಮಕ್ಕಳು, ರೊಟ್ಟಿ ಪಲ್ಯೆಗಳ ಸಾಂಸಾರಿಕ ದಿನಚರಿ ಬಗ್ಗೆ ಅವರು ನಕ್ಕು ನಕ್ಕು ವಿವರಿಸಿ, ಎಲ್ಲರನ್ನೂ ನಗಿಸಿದ್ದು ಗಮನಾರ್ಹವಾಗಿತ್ತು. ವಿಮರ್ಶೆ ಏನಾದರೂ ಹೇಳಲಿ, ಕಾವ್ಯ ಬರೆಯುವುದನ್ನು ಅದು ತಡೆಯದು ಎನ್ನುವುದು ಅವರ ಬರಹದ ಹಿಂದಿರುವ ಸ್ಫೂರ್ತಿಮಂತ್ರ."

ಈ ಆತ್ಮಕಥನಕ್ಕೆ ಕೊನೆಯ ಅಂಕ ಜೋಡಿಸಿದ್ದು ಸ. ಉಷಾ, ಬದುಕಿನ ಎಳವೆಯಿಂದ ಕಾಡಿದ ಒಳ ಹೊರಗಿನ ನಿಜಗಳ ಪ್ರಶ್ನೆ, ಅಪ್ಪ, ಅಜ್ಜಂದಿರ, ಕೌಟುಂಬಿಕ ಸಂಬಂಧಗಳ ನಿಜದ ಪ್ರಶ್ನೆಗಳು, ಸಾಹಿತ್ಯ ಕಲಿಕೆ, ಬೋಧನೆ ಮತ್ತು ಬರಹಗಳಲ್ಲಿ ತಮ್ಮನ್ನು ಉದ್ದಕ್ಕೂ ಕಾಡಿಸಿದ್ದು ಬೆಳೆಯಲು

ಕಾರಣವಾದ ಬಗೆಯನ್ನು ಮಿತವಾದ ಅರ್ಥಗರ್ಭಿತವಾದ ಪದ್ಯದ ರೀತಿ ಅವರು ಹೇಳಿದ್ದುದು ವಿಶಿಷ್ಟವಾಗಿತ್ತು. ಈ ಉಷೆಯ ಜೊತೆ ಸಂವಾದ ಮುಗಿದಾಗ ಸಂಧ್ಯೆಯ ಆಗಮನವಾಗಿತ್ತು. ಲೇಖಕಿಯರು ತಮ್ಮ ಗೂಡು, ನೆಲೆಗಳಿಗೆ ಗಂಟು ಮೂಟೆ ಕಟ್ಟ ತೊಡಗಿದರು.

ಲೇಖಕಿಯರ ಈ 'ಸಂವಾದ'ಕ್ಕೆ ನೆರವಾಗಲೆಂದು ಆಹ್ವಾನಿತರಾದ ಲೇಖಕಿಯರು ಹೇಮಲತಾ ಮಹಿಷಿ, ಶಾಂತಾ ನಾಗರಾಜ್, ಲೀಲಾವತಿ ಎಸ್. ರಾವ್, ಎನ್. ಗಾಯತ್ರಿ, ಸುಮಿತ್ರಾ ಬಾಯಿ ಮುಂತಾದವರು. ಇವರಲ್ಲದೆ ಸಮತಾ ಕಾರ್ಯಕರ್ತೆಯರು, ಮಹಿಳಾ ಅಧ್ಯಯನ ವಿಭಾಗದ ವಿದ್ಯಾರ್ಥಿನಿಯರು, ಸಂಶೋಧಕರು, ಮೈಸೂರಿನ ಸಾಹಿತ್ಯಾಸಕ್ತರಿಗೂ ಪತ್ರಕರ್ತರಿಗೂ ಈ ಚರ್ಚೆಗಳು ಅರ್ಥವತ್ತಾಗಿಸಲು ಕ್ರಿಯಾಶೀಲವಾಗಿ ಪಾಲುಗೊಂಡಿದ್ದರು. ಈ ಸಂವಾದದಲ್ಲಿ ಎದ್ದ ಮಹಿಳಾ ಪ್ರಶ್ನೆಗಳಿಗೆ, ಮಹಿಳಾ ಬರಹದ ಸಂಬಂಧದ ಪ್ರಶ್ನೆಗಳಿಗೆ ಅಲ್ಲಿ ಉತ್ತರ ದೊರೆಯಿತೆನ್ನುವುದು ಕಷ್ಟ. ಆದರೆ ತಮ್ಮ ಬಗ್ಗೆ, ಅಳುಕಿಲ್ಲದೆ, ನಿಜವನ್ನು ಹುಡುಕಿಕೊಳ್ಳುವ ಪ್ರಯತ್ನ ಲೇಖಕಿಯರು ಮಾಡಿದರೆಂಬುದು ಮುಖ್ಯ.

## ಹೋರಾಟ

# ನ್ಯಾಯಕ್ಕಾಗಿ ಹೋರಾಡುತ್ತೇವೆ, ನಾವು

'ಅಂತರರಾಷ್ಟ್ರೀಯ ಮಹಿಳಾ ದಿನ' ಮಹಿಳಾ ಸಮೂಹಕ್ಕೆ ಮತ್ತು ಸಮಾನತೆಯನ್ನು ಗೌರವಿಸುವ ಜನಸಮುದಾಯಕ್ಕೆ ಹೊಸ ಚೈತನ್ಯ ನೀಡಿದ ದಿನ. ಹೋರಾಟದ ಅಂತ್ಯವು ಜಯವೆಂದು ಸಾಧಿಸಿ ತೋರಿಸಿದ ದಿನ. ಈ ದಿನವನ್ನು ಬೆಂಗಳೂರಿನ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಜನವಾದಿ ಮಹಿಳಾ ಸಂಘಟನೆ, ಸುಮಂಗಲಿ ಸೇವಾಶ್ರಮ ಒಟ್ಟಾಗಿ ಕೂಡಿ ಆಚರಿಸಿದವು.



ಮಹಿಳೆಯರ ಕುರಿತು ನ್ಯಾಯಾಂಗದ ಪಕ್ಷಪಾತ ಧೋರಣೆಯ ವಿರುದ್ಧ ನಡೆಯುತ್ತಿರುವ ಹೋರಾಟದತ್ತ ಗಮನ ಸೆಳೆಯುವುದು ಮತ್ತು ಆ ಹೋರಾಟವನ್ನು ಗಟ್ಟಿಗೊಳಿಸುವುದು ಆ ದಿನದ ಮುಖ್ಯ ಕಾರ್ಯಕ್ರಮವಾಗಿತ್ತು. ಮೂರೂ ಸಂಘಟನೆಗಳ ಮಹಿಳೆಯರೂ ಒಟ್ಟಾಗಿ ಕೂಡಿ ಗಾಂಧಿಭವನದ ಆವರಣದಿಂದ ಮೆರವಣಿಗೆಯಲ್ಲಿ ಹೊರಟರು. ನ್ಯಾಯಾಂಗದ ಲಿಂಗಭೇದ ನೀತಿಯನ್ನು ಖಂಡಿಸಿ, ಮೆರವಣಿಗೆಯಲ್ಲಿ ಘೋಷಣೆಗಳನ್ನು ಕೂಗುತ್ತಾ ಹೊರಟ ನೂರಾರು ಮಹಿಳೆಯರು ಶೇಷಾದ್ರಿಪುರಂನ ನೆಹರೂ ಪಾರ್ಕ್‌ನಲ್ಲಿ ನೆರೆದರು.

*ರಾಜಸ್ಥಾನದ ಭತೇರಿ ಗ್ರಾಮದ*
*ಭಾಂವ್ರಿದೇವಿಯ ಕಥೆಯಿದು*
*ಬಡವರ ಬಾಳಿನ ಮಾಯದ ನೋವಿನ*
*ಮುಗಿಯದ ವ್ಯಥೆಯ ಕಥೆಯಿದು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಗೆಳತಿಯರು ಹಾಡಿದ ಭಾಂವ್ರಿದೇವಿಗಾದ ಅನ್ಯಾಯ ಮತ್ತು ವ್ಯಥೆಯ ಕಥೆಯ ಗೀತೆಯೊಂದಿಗೆ ಆರಂಭವಾದ ಸಾರ್ವಜನಿಕ ಸಭೆಯ ಅಧ್ಯಕ್ಷತೆಯನ್ನು ಸುಮಂಗಲಿ ಸೇವಾಶ್ರಮದ ಶ್ರೀಮತಿ ಎಸ್.ಜಿ. ಸುಶೀಲಮ್ಮ ವಹಿಸಿದ್ದರು. ಪ್ರಾರಂಭದಲ್ಲಿ ಕೆ.ಎಸ್. ವಿಮಲಾ " ಇಂದು ಮಹಿಳೆಯ ಮನೋಸ್ಥೈರ್ಯವನ್ನು ಕುಂದಿಸಲು ನಮ್ಮ ವ್ಯವಸ್ಥೆ ಬಳಸುತ್ತಿರುವ ಆಯುಧ 'ಅತ್ಯಾಚಾರ'; ಇಂತಹ ನೀಚತನವನ್ನು ಧೈರ್ಯವಾಗಿ ಪ್ರಶ್ನಿಸಿದ ಮಹಿಳೆಯನ್ನು ಸಮಾಜ ಮಾತ್ರವಲ್ಲ, ಕಾನೂನು ಕೂಡ ಗೌರವಿಸುತ್ತಿಲ್ಲ. ಭಾಂವ್ರಿದೇವಿ ಪ್ರಕರಣದಲ್ಲಿ 'ಉಚ್ಚ ಜಾತಿಯ ಜನ ಕೆಳಜಾತಿಯ ಮಹಿಳೆಯ ಮೇಲೆ ಅತ್ಯಾಚಾರ ಮಾಡುವುದಿಲ್ಲ' ಎಂಬ ಕುರುಡು ತೀರ್ಪು ನೀಡಿ ತನ್ನ ಸ್ತ್ರೀ ವಿರೋಧಿ ನಿಲುವನ್ನು ಸಾಬೀತು ಮಾಡಿದೆ. ಈ ನಿಲುವನ್ನು ಬದಲಿಸಲು ಸಾಮೂಹಿಕ ಹೋರಾಟ ಮತ್ತು ಸಾರ್ವಜನಿಕ ಅರಿವು ಮೂಡಿಸುವುದು ಅಗತ್ಯ ಎಂದು ಮಾತನಾಡಿದರು. ಭಾಷಣಕಾರ್ತಿಯಾಗಿ ಆಗಮಿಸಿದ್ದ ನ್ಯಾಯವಾದಿ ಶ್ರೀಮತಿ ಟಿ.ಎನ್. ಮಂಜುಳಾ ದೇವಿಯವರು ನ್ಯಾಯಾಂಗದ ಕಣ್ಣಿನಲ್ಲಿ ಸ್ತ್ರೀ ಪುರುಷರು ಸಮಾನರು ಎಂದು ವಿವರಿಸುತ್ತಾ, ಕೆಲವೊಮ್ಮೆ ಮಾತ್ರ ಹೆಣ್ಣಿಗೆ ಅಚಾತುರ್ಯದಿಂದ ಅನ್ಯಾಯವಾಗುತ್ತದೆ, ಎಂಬುದನ್ನು ಕೆಲವೊಂದು ನಿದರ್ಶನಗಳನ್ನು ಕೊಟ್ಟು ವಿವರಿಸಿದರು. ಆದರೆ ಸಭೆಯಲ್ಲಿ ಇದಕ್ಕೆ ತೀವ್ರವಾದ ಪ್ರತಿಕ್ರಿಯೆಗಳು ಮೂಡಿಬಂದು ಸ್ಪಷ್ಟನೆಗಳು ನೀಡಲ್ಪಟ್ಟವು. ಮತ್ತೊಬ್ಬ ಭಾಷಣಕಾರರಾದ ಡಾ|| ಜಿ. ರಾಮಕೃಷ್ಣರವರು ನ್ಯಾಯಾಂಗ ಸ್ವತಂತ್ರ ಸಂಸ್ಥೆಯಂತೆ ಕಾರ್ಯ ನಿರ್ವಹಿಸುತ್ತಿಲ್ಲ, ನಿರ್ವಹಿಸಲು ಸಾಧ್ಯವೂ ಇಲ್ಲ. ಆದರೆ ಇಂದು ನ್ಯಾಯಾಲಯಗಳು ಇಡೀ ದೇಶದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಜೀವನದ ಮೇಲೆ ಪರಿಣಾಮ ಬೀರುವ ತೀರ್ಪುಗಳನ್ನು ನೀಡುತ್ತಾ ಏಕಾಧಿಪತ್ಯ ತೋರುತ್ತಿರುವುದು ಪ್ರಜಾಪ್ರಭುತ್ವಕ್ಕೆ ಒಳ್ಳೆಯ ಲಕ್ಷಣವಲ್ಲ, ಎಂದು ಅಭಿಪ್ರಾಯ ಪಟ್ಟರು. ಮತ್ತೊಬ್ಬ ಭಾಷಣಕಾರರಾದ ಕೋ. ಚನ್ನಬಸಪ್ಪನವರು ಇತಿಹಾಸದುದ್ದಕ್ಕೂ ಹೆಣ್ಣಿನ ಮೇಲಾಗಿರುವ ಅನ್ಯಾಯಗಳನ್ನು, ನ್ಯಾಯಾಲಯ ಅದನ್ನು ಕಂಡ ಬಗೆಯನ್ನು ಕುರಿತು ವಿವರಿಸಿದರು. ಕೊನೆಗೆ ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ಸುಶೀಲಮ್ಮನವರು ಎಲ್ಲಿಯವರೆಗೆ ಹೆಣ್ಣಿನ ಮೇಲೆ ಇಂತಹ ಅನ್ಯಾಯ ಮತ್ತು ಅತ್ಯಾಚಾರಗಳು ನಡೆಯುತ್ತಿರುವುದೋ ಅಲ್ಲಿಯವರೆಗೂ ನಮ್ಮ ಹೋರಾಟ ನಿಲ್ಲುವುದಿಲ್ಲ, ಎಂದು ಸ್ಪಷ್ಟಪಡಿಸಿದರು.

*ಅನ್ಯಾಯ ಅಡಗಿಸಿ ನ್ಯಾಯವ ಪಡೆಯಲು*
*ಕೊನೆಯೇ ಇಲ್ಲದ ಸಮರವಿದು*
*ಸ್ತ್ರೀ ಸಮುದಾಯದ ಸ್ತ್ರೀ ಶಕ್ತಿ ರಕ್ಷೆಯ*
*ಒಗ್ಗೂಡಿ ಹೋರಾಡೋ ಕರೆಯಿದು.*

ಭಾಂವ್ರಿದೇವಿ ನಡೆಸಿರುವ ಹೋರಾಟವನ್ನು ಗೌರವಿಸಿ, ಅದನ್ನು ಮುಂದುವರೆಸುವ ದೀಕ್ಷೆ ಹೊತ್ತು ಈ ಸಭೆ ಮುಕ್ತಾಯವಾಯಿತು. ಇದೇ ಸಂದರ್ಭಕ್ಕೆಂದು ಜಾಗೃತಿ ಮಹಿಳಾ ಪ್ರಕಾಶನದಿಂದ 'ನ್ಯಾಯಕ್ಕಾಗಿ ಕಾದಿರುವ ಭಾಂವ್ರಿ ದೇವಿ' ಕಿರುಹೊತ್ತಿಗೆಯನ್ನು (ರಚನೆ: ನೇಮಿಚಂದ್ರ ಮತ್ತು ಹೇಮಲತಾ ಮಹಿಷಿ) ಪ್ರಕಟಿಸಲಾಯಿತು.

# ಒಂದು ಕಾಲ್ಪನಿಕ ಸಂವಾದ

• ತೆಲಗು ಮೂಲ: ಆಮನಿ
ಕನ್ನಡಕ್ಕೆ : ಕೆ. ನಾರಾಯಣಸ್ವಾಮಿ

ಯಮ : ಚಿತ್ರಗುಪ್ತಾ!

ಚಿತ್ರಗುಪ್ತ : ಪ್ರಭೂ!

ಯಮ : ಈ ದಿನ ನಾವು ಇತ್ಯರ್ಥಪಡಿಸಬೇಕಾಗಿರುವ ಪ್ರಕರಣಗಳು ಯಾವುವು? ವಿವರಿಸು.

ಚಿತ್ರಗುಪ್ತ : ಚಿತ್ತ ಪ್ರಭು! ಈ ದಿನ ನರಕ ಕೂಪ ಎಂದು ಕರೆಯಲಾಗಿರುವ, ಶಿಕ್ಷೆಗೆ ಅರ್ಹರಾಗಿರುವ ನಾರಿಯರ ವಿಚಾರಣೆ ಮಾಡಬೇಕಾಗಿದೆ ಪ್ರಭೂ!

ಯಮ : ಈ ಅಬಲೆಯರು ಮಾಡಿರುವ ಅಪರಾಧವಾದರೂ ಏನು?

ಚಿತ್ರಗುಪ್ತ: ಇವರು ಪ್ರಾಣ ಬಿಡುತ್ತಿರುವ ಸಮಯದಲ್ಲಿ ತಮ್ಮ ಸಾವಿಗೆ ತಮ್ಮ ಪತಿಯವರೇ ಕಾರಣವೆಂದು ಸತ್ಯವಾದ ಹೇಳಿಕೆ ನೀಡಿದ್ದು, "ತಮ್ಮ ಪತಿವ್ರತಾಧರ್ಮ" ಉಲ್ಲಂಘಿಸಿರುವುದರಿಂದ ಯಮಪುರಿಗೆ ಬಂದಿದ್ದಾರೆ ಪ್ರಭೂ!

ಯಮ : ಹಾಗಿದ್ದ ಮೇಲೆ ನರಕದಲ್ಲಿನ ಶಿಕ್ಷೆಗಳನ್ನೆಲ್ಲಾ ವಿಧಿಸಿದ್ದಾಯಿತೆ?

ಚಿತ್ರಗುಪ್ತ : ಎಲ್ಲಾ ಶಿಕ್ಷೆಗಳನ್ನು ವಿಧಿಸಿದ್ದಾಯಿತು ಪ್ರಭೂ! ಆದರೂ....

ಯಮ : ಆ... ಆದರೂ....! ಅನುಮಾನ ಏನು?ಏಕೆ ಚಿತ್ರಗುಪ್ತಾ! ಹೇಳು.

ಚಿತ್ರಗುಪ್ತ : ಅದೇನು ವಿಚಿತ್ರವೋ ಪ್ರಭೂ! ಎಷ್ಟು ಚಿತ್ರಹಿಂಸೆ ನೀಡಿದರೂ ಈ ಅಬಲೆಯರು ಜಗ್ಗುವವರೇ ಅಲ್ಲ. ಆನಂದದಿಂದ ಇದ್ದಾರೆ. ನಿಶ್ಚಿಂತೆಯಿಂದ ಇದ್ದಾರೆ. ಪ್ರಭೂ!

ಯಮ : ತಕ ತಕ ಎಂದು ಕುದಿಯುವ ಎಣ್ಣೆಯಲ್ಲಿ ಮುಳುಗಿಸಿದೆಯಾ?

ಚಿತ್ರಗುಪ್ತ: ಅದರಲ್ಲೂ ಮುಳಿಗಿಸಿದ್ದಾಯಿತು. ಆದರೆ ಎಳ್ಳಷ್ಟೂ ಬಾಧೆ ಪಡಲಿಲ್ಲ ಇವರು.

ಯಮ : ಏಕೆಂದು ವಿಚಾರಿಸಿದೆಯಾ?

ಚಿತ್ರಗುಪ್ತ : ವಿಚಾರಿಸಿದೆ ಪ್ರಭು, "ನಮ್ಮ ಗಂಡಂದಿರು ಆಸಿಡ್ಡು, ಸೀಮೆಎಣ್ಣೆ ಹಾಕಿ ಸಾಯಿಸಿದ್ದರಿಂದ ಬಂದಿರುವ ನಮಗೆ ಇದೊಂದು ಲೆಕ್ಕವೇ?" ಎಂದು ನಗುನಗುತ್ತಾ ಉತ್ತರಿಸಿದರು ಪ್ರಭು!

ಯಮ : ಗರಗಸದಿಂದ ಕೊಯ್ಯುವ ಶಿಕ್ಷೆ ವಿಧಿಸಿದೆಯಾ?

ಚಿತ್ರಗುಪ್ತ : ಅದೂ ಆಯಿತು ಪ್ರಭು! "ವರದಕ್ಷಿಣೆಗಾಗಿ ಗಂಡ, ಅತ್ತೆ ಮಾವ, ನಾದಿನಿಯರು ಪ್ರತಿದಿನ ಮಾಮೂಲಿಯಾಗಿ ಕೊಡುತ್ತಿದ ಗರಗಸದ ಹಿಂಸೆಯಿಂದ ಪಾರಾಗಿ ಬಂದಿರುವ ನಮಗೆ ಈ ಗರಗಸ ಏನು ತಾನೆ ಮಾಡಬಲ್ಲದು ನಮ್ಮನ್ನು" ಎಂದು ಉದಾಸೀನವಾಗಿ ಉತ್ತರಿಸಿದರು ಪ್ರಭು!

ಯಮ : ಸರಿ... ಹಾಗಿದ್ದ ಮೇಲೆ ಉಸಿರುಕಟ್ಟುವ ಆ ರಾಸಾಯನಿಕ ಕೋಣೆಗೆ ಎಸೆಯಿರಿ.

ಚಿತ್ರಗುಪ್ತ : "ಪ್ರತಿದಿನ ಕಾರ್ಖಾನೆಗಳು, ವಾಹನಗಳು ಉಗುಳುವ ವಿಷಗಾಳಿ ಹೀರಿ ಹೀರಿ ಬದುಕಿ ಬಂದವರಂತೆ! "ಈ ರಾಸಾಯನಿಕ ಕೋಣೆಗಳಲ್ಲೂ ನೆಮ್ಮದಿಯಿಂದ ಇದ್ದರು ಪ್ರಭು!

ಯಮ : ಊಟ, ನೀರು, ನಿದ್ದೆ ಇಲ್ಲದೆ ಪ್ರತಿಕ್ಷಣ ದುಡಿಯುವ 'ಹಾರಿಬಲಂ ಸೆಲ್' ಗೆ ಎಸೆಯಿರಿ.

ಚಿತ್ರಗುಪ್ತ : "ಮನೆಕೆಲಸ, ಕಛೇರಿ ಕೆಲಸ, ಹೊಲಗಳಲ್ಲಿ ಕೆಲಸ ಎಲ್ಲಾ ಸೇರಿಸಿ ಪ್ರತಿದಿನ ದಿನಕ್ಕೆ 18 ಗಂಟೆ

ಓದಿ

## ನ್ಯಾಯಕ್ಕಾಗಿ ಕಾದಿರುವ ಭಾಂವ್ರಿದೇವಿ

ನೇಮಿಚಂದ್ರ

ಹೇಮಲತಾ ಮಹಿಷಿ

ಜಾಗೃತಿ ಮಹಿಳಾ ಪ್ರಕಾಶನ, ಬೆಂಗಳೂರು

ಬೆಲೆ - 5 ರೂಪಾಯಿ

## ಅಭಿನಂದನೆ

* ಪ್ರಥಮ ಅತ್ತಿಮಬ್ಬೆ ಪ್ರಶಸ್ತಿ ಪಡೆದ ಶ್ರೀಮತಿ ಟಿ. ಸುನಂದಮ್ಮನವರಿಗೆ
* ಶಾಂತಲಾ ಪ್ರಶಸ್ತಿ ಪಡೆದ ನಾಟ್ಯವಿಶಾರದೆ ಶ್ರೀಮತಿ ವೆಂಕಟಲಕ್ಷ್ಮಮ್ಮನವರಿಗೆ
* ಅನುಪಮಾ ಪ್ರಶಸ್ತಿ ಪಡೆದ 'ಕಜ್ಜಾಯ' ಖ್ಯಾತಿಯ ಶ್ರೀಮತಿ ಸುನಂದಾ ಬೆಳಗಾಂವಕರ್‌ರವರಿಗೆ.
* ಗೀತಾ ದೇಸಾಯಿ ದತ್ತಿನಿಧಿ ಬಹುಮಾನ ಪಡೆದ ಶ್ರೀಮತಿ ಬಿ. ಎನ್. ಸುಮಿತ್ರಾಬಾಯಿಯವರಿಗೆ
* ಎಚ್. ವಿ. ಸಾವಿತ್ರಮ್ಮ ದತ್ತಿನಿಧಿ ಬಹುಮಾನ ಪಡೆದ ಶ್ರೀಮತಿ ಭಾಗಿರಥೀ ಹೆಗ್ಗಡೆಯವರಿಗೆ

**_Reg. No. MAG (5) PRC, DEGL 036/89/87_**

BOOK POST/Periodicals

To

*If Undelivered please return to :*

**Jagruthi Mahila Adhyayana Kendra**

401, Vijay Tower, 2nd Main, RPC Layout

Vijayanagar, II Stage, Bangalore - 560 040

**ACHALA** - Edited by N. Gayathri. Published by Dr. G. Ramakrishna on behalf of Jagruthi Mahila Adhyayana Kendra, 26, 1st Main Road, Vyalikaval, Bangalore - 03. DTP & Printing by Excellent Graphics, Bangalore - 40